ಪ್ರಕಟನೆ : ೫.

# ಅಭಿಸಾರ

(ಮೂರು ಖಂಡರೂಪಕಗಳು)

ಕೆ. ವಿ. ಸುಬ್ಬಣ್ಣ.



ಶ್ರೀ ನೀಲಕಂಠೇಶ್ವರ ನಾಟ್ಯಸೇವಾಸಂಘ,
ಹೆಗ್ಗೋಡು.

ಪ್ರಕಾಶಕರು :

ಪ್ರಕಟನಾಶಾಖೆ

ಶ್ರೀ ನೀಲಕಂಠೇಶ್ವರ ನಾಟ್ಯಸೇವಾಸಂಘ,



ಹೆಗ್ಗೋಡು (ಸಾಗರ–ಶಿವಮೊಗ್ಗ)

ಸಂಪಾದಕ :

**ಕೆ. ವಿ. ಸುಬ್ಬಣ್ಣ.**

ಮುಖಚಿತ್ರ :

**ಶ್ರೀ ಆರ್. ಎಸ್. ನಾಯಿಡು.**

ಮಾರಾಟಗಾರರು :

**ಶ್ರೀ. ಟಿ. ಮಹಾಬಲೇಶ್ವರ ಭಟ್ಟ,**

ಜಲಂಧರ ಪ್ರಕಟನಾಲಯ,

(ಸಾಗರ–ಶಿವಮೊಗ್ಗ)

ಮುದ್ರಕರು :

ಚೇತನ ಮುದ್ರಾಲಯ

ರಮಾವಿಲಾಸ ಅಗ್ರಹಾರ, ಮೈಸೂರು.

ಬೆಲೆ :

ಒಂದು ರೂಪಾಯಿ.

ಮೈಸೂರು ಮಹಾರಾಜ ಕಾಲೇಜಿನ

" ಮಿತ್ರಮೇಳ "ದ

ಸಹೃದಯವೃಂದಕ್ಕೆ

ಅರ್ಪಿತ.

# ಅರಿಕೆ

ಮೈಸೂರು ಆಕಾಶವಾಣಿಯಿಂದ ಹಿಂದೆ ಪ್ರಸಾರವಾದ ನನ್ನ ನಾಟಕಗಳಲ್ಲಿ ಮೂರನ್ನು ಆಯ್ದು ಇಲ್ಲಿ ಪ್ರಕಟಿಸುತ್ತಿದ್ದೇನೆ.

ಬೌದ್ಧ ಕಥಾಕೋಶದಿಂದ ಆಯ್ದ ಒಂದು ಸಂಗತಿ 'ಅಭಿಸಾರ'ದಲ್ಲೂ, ಜಾತಕಕಥೆಗಳಿಂದ ಎತ್ತಿಕೊಂಡ ಒಂದು ಕಥೆ 'ಕ್ಷಾಂತಿವಾದಿ'ಯಲ್ಲೂ ಬಂದಿದೆ. ರಷ್ಯಾದ ವಿಖ್ಯಾತ ಲೇಖಕ ಮ್ಯಾಕ್ಸಿಂ ಗಾರ್ಕಿಯ ಕಥೆಯನ್ನು ಮನಸ್ಸಿನಲ್ಲಿಟ್ಟುಕೊಂಡು, 'ಕೆಳದಿನೃಪವಿಜಯ'ದಲ್ಲಿ ಬರುವ ಐತಿಹಾಸಿಕ ಸನ್ನಿವೇಶವೊಂದರ ಕಟ್ಟಿನಲ್ಲಿ ಅದನ್ನು ಕೂಡಿಸಿದ್ದು 'ವೀರಮಾತೆ'.

ಇವುಗಳನ್ನು ಶ್ರಮಪಟ್ಟು ಪ್ರಯೋಗಿಸಿದ ಮೈಸೂರು ಆಕಾಶವಾಣಿಯ ಕಲಾವಿದರಿಗೆ ಹಾಗೂ ಪ್ರಕಟನೆಗೆ ಅವಕಾಶವಿತ್ತ ಅಧಿಕಾರಿಗಳಿಗೆ ನಾನು ಋಣಿಯಾಗಿದ್ದೇನೆ. ಚಂದವಾದ ಹೊದಿಕೆಯನ್ನು ರಚಿಸಿಕೊಟ್ಟ ಸುಪ್ರಸಿದ್ಧ ಕಲಾವಿದ ಶ್ರೀ ಆರ್. ಸೀತಾಪತಿ ನಾಯಿಡು ಅವರಿಗೂ, ಪ್ರಕಟನೆಯಲ್ಲಿ ನೆರವಾದ ಗೆ। ಎಂ. ಆರ್. ಮಂಜಪ್ಪನವರಿಗೂ, ಅಂದವಾಗಿ ಮುದ್ರಿಸಿದ 'ಚೇತನ ಮುದ್ರಾಲಯ'ದವರಿಗೂ ನನ್ನ ಕೃತಜ್ಞತೆ ಸಲ್ಲಬೇಕು.

ಆರಂಭದ ತೊದಲು ಅಭಿಸಾರ ಇದು ಎಂದು ಅರಿತಿರುವ ಲೇಖಕ ಈ ಕೃತಿಗಳ ಬಗೆಗೆ ಹೆಚ್ಚು ಹೇಳಿಕೊಳ್ಳುವ ಆವಶ್ಯಕತೆಯಿಲ್ಲ.

ಮುಂಡಿಗೇಸರ
ಆಗಸ್ಟ್, ೫೫

—ಕೆ. ವಿ. ಸುಬ್ಬಣ್ಣ.

# ಅಭಿಸಾರ

ಮೂರು ಖಂಡ ರೂಪಕಗಳು

ಕೆ. ವಿ. ಸುಬ್ಬಣ್ಣ.

# ಪರಿವಿಡಿ.

# ಅಭಿಸಾರ

ಪಾತ್ರಗಳು : ವಾಸವದತ್ತೆ,
ಗೌತಮಿ,
ತರುಣ,
ಉಪಗುಪ್ತ,
ಮತ್ತು ವಿಟರು, ಡಂಗುರದವ, ಪ್ರೇಮಿಗಳು, ರೋಗಿ, ನಾಗರಿಕ ಇತ್ಯಾದಿ.

*   *   *   *

[ನಾಟಕದ ಆರಂಭದಲ್ಲಿ : ವಾದ್ಯಗಳ ಹಾಗೂ ಗೆಜ್ಜೆಯ ಮಧುರ ಸ್ವರದಿಂದ ಲಾಸ್ಯನರ್ತನವಾಗುತ್ತಿರುವುದು ಸೂಚಿತವಾಗುತ್ತದೆ. ನಡು ನಡುವೆ ಹಲವಾರು ಗಂಡು ದನಿಗಳ ಮೆಚ್ಚುಗೆ : 'ಅಹೋ !'; 'ಭಲಾ !'; 'ಭಾಪು !'; 'ನೃತ್ಯವೆಂದರೆ ಇದು !'; 'ಇದರ ಮುಂದೆ ಮೇನಕೆಯೆ ?' ಇತ್ಯಾದಿ. ನೃತ್ಯದ ಗತಿ ಶೀಘ್ರವಾಗುತ್ತ ಬಂದು ಪ್ರೇಕ್ಷಕರ ಮೆಚ್ಚುಗೆ ಹಿರಿದಾಗಲು ನೃತ್ಯ ಏಕಾಯೇಕಿ ನಿಂತು ಹೋಗುವುದು. ನರ್ತಕಿ ಬಂದು ಕುಳಿತ ಸದ್ದು.]

ವಿಟ ೧ :—ಭಾಪು ! ಬಹು ಚೆನ್ನಾಗಿ ನರ್ತಿಸಿದೆ, ವಾಸವದತ್ತೆ.

ವಿಟ ೨ :—ಇಂತಹ ನರ್ತನವನ್ನು ನಾನು ನೋಡಿಯೇ ಇರಲಿಲ್ಲ.

ವಿಟ ೩ :—ನೃತ್ಯವೇ ನಿನ್ನ ರೂಪನ್ನು ತಾಳಿಬಂದಂತೆ ತೋರಿತು, ಸುಂದರಿ.

ವಿಟ ೪ :—ಯೌವ್ವನದ ಕಣ್ಣುಗಳನ್ನು ಕುಣಿಸುತ್ತ ವಿಲಾಸದ ಅಂಗ ವಿನ್ಯಾಸದೊಡನೆ ಸೌಂದರ್ಯವೇ ನರ್ತಿಸಿದಂತಿತ್ತು, ವಾಸವದತ್ತೆ !

[ಗೆಜ್ಜೆಗಾಲಿನ ಸದ್ದು ಕ್ಷಯಿಸುವುದು.]

ವಿಟ ೧ :—ಇದೇನು ವಿಪರೀತ ! ನಾವಿಲ್ಲಿ ಹೊಗಳುತ್ತ ಕುಳಿತರೆ ಆಕೆ ಎದ್ದು ನಡೆದಳು.

ವಿಟ ೨ :—ಬರುತ್ತಾಳೆ ಈಗ.

ವಿಟ ೩ :—ಬರುತ್ತಾಳೆ ! . . . . ಇದು ಹೊಸದಲ್ಲ. ಆಕೆಗೆ ಅದೊಂದು ಆಟ–ನಮ್ಮನ್ನು ಹಿಂಸಿಸುವುದರಲ್ಲೆ ಆಕೆಗೆ ಆನಂದವಿರಬೇಕು !

ವಿಟ ೪ :—ಎಂದರೆ? . . . .

ವಿಟ ೫ :—ಬರುವುದೇ ಇಲ್ಲವೇನು?

ವಿಟ ೧ :—ಅಗೋ, ಗೌತಮಿ ಬರುತ್ತಿದ್ದಾಳೆ. ಆಕೆಯನ್ನೇ ಕೇಳೋಣ.

[ಹೆಜ್ಜೆ ವೃದ್ಧಿಸುವುದು.]

ವಿಟ ೩ :—ವಾಸವದತ್ತೆಯೆಲ್ಲಿ, ಗೌತಮಿ?

ಗೌತಮಿ :—ಅಮ್ಮಾಜಿಯವರು ಬಹಳ ಬಳಲಿದ್ದಾರೆ. ಈದಿನ ಯಾರೂ ಅವರನ್ನು ಕಾಣುವಂತಿಲ್ಲ.

ವಿಟ ೨ —ಕಾಣುವಂತಿಲ್ಲ?

ವಿಟ ೧ :—ಈಗತಾನೆ ಚೆನ್ನಾಗಿ ನರ್ತಿಸಿದಳು!

ಗೌತಮಿ :—ಕ್ಷಮಿಸಬೇಕಾಗಿ ಕೇಳಿಕೊಂಡಿದ್ದಾರೆ.

ವಿಟ ೨ :—ಎಲ್ಲವೂ ಕಪಟ!

ವಿಟ ೩ :—ನಾನು ಮೊದಲೇ ಹೇಳಲಿಲ್ಲವೆ?

ವಿಟ ೪ :—ಚೆಲುವಿಗೂ ಬಳಲಿಕೆ–ಎಂತಹ ವಿಚಿತ್ರ!

ವಿಟ ೧ :—ಸರಿ. ಇನ್ನು ಇಲ್ಲಿ ಕುಳಿತಾದರೂ ಮಾಡುವುದೇನು? ನಡೆಯಿರಿ, ಹೋಗೋಣ.

[ವಿಟರು ನಿಷ್ಕ್ರಮಿಸುವ ಸದ್ದು ; ಹೆಜ್ಜೆಗಳು ಕ್ಷಯಿಸಿದ ಅನಂತರ.]

ಗೌತಮಿ :—ತಾವು, . . .

ತರುಣ :— . . . ಏನು?

ಗೌತಮಿ :—ಸ್ವಲ್ಪವೇಳೆ ಇಲ್ಲಿಯೇ ವಿಶ್ರಾಂತಿ ಪಡೆಯುತ್ತೀರಾ?

ತರುಣ :—ಆಗಲಿ . . . ನಿಮ್ಮ ಒಡತಿಗೆ ಆದಷ್ಟು ಬೇಗ ಬರುವಂತೆ ಹೇಳು.

ಗೌತಮಿ :—ಕ್ಷಮಿಸಿ, ನಮ್ಮ ಒಡತಿ ಇಂದು ಯಾರಿಗೂ ಕಾಣಿಸಿಕೊಳ್ಳುವುದಿಲ್ಲ.

ತರುಣ :—ನನಗೂ?

ಗೌತಮಿ :—ಯಾರಿಗೂ!

ತರುಣ :—ನಾನು ಆಕೆಯನ್ನು ಕಾಣಲೇಬೇಕು.

ಗೌತಮಿ :—ಕ್ಷಮಿಸಿ . . .

ತರುಣ :—ಸಾಧ್ಯವಿಲ್ಲ, ನಾನು ಆಕೆಯನ್ನು ನೋಡಲೇಬೇಕು . . . . . . ಹಾಗೆಂದು ಹೋಗಿ ತಿಳಿಸು . . . ತಿಳಿಸು ಹೋಗು !

[ಹೆಜ್ಜೆ ಕ್ಷಯಿಸುತ್ತಿರಲು ದೃಶ್ಯಪರಿವರ್ತನೆಯನ್ನು ಸೂಚಿಸುವ ಶಬ್ದ ಚಮತ್ಕಾರ.]

* * * *

ವಾಸವದತ್ತೆ :—(ತುಂಟುಮಾಡಿ ಗೆದ್ದ ಮಗುವಿನಂತೆ ದೊಡ್ಡದಾಗಿ ನಗುತ್ತ) ಹ್ನು! ಹಾಗೆಯೇ ಮಾಡಬೇಕು ಅವರಿಗೆ . . . . ಅಸಹ್ಯಪ್ರಾಣಿಗಳು! . . . (ಮತ್ತೆ ನಗು)

[ಹೆಜ್ಜೆ ವೃದ್ಧಿಸುವುದು]

ವಾಸವ :—ಹೇಳಿದೆಯಾ, ಗೌತಮಿ ?

ಗೌತಮಿ :—ಹೇಳಿದೆ, ಅಮ್ಮಾಜಿ. ಎಲ್ಲರೂ ಹೊರಟರು ; ಆದರೆ ಒಬ್ಬ ಮಾತ್ರ ಹಟಹಿಡಿದು ಕುಳಿತುಬಿಟ್ಟಿದ್ದಾನೆ. ನಿನ್ನನ್ನು ನೋಡದೆ ಹೋಗುವುದೇ ಇಲ್ಲವಂತೆ! . . . ಇನ್ನೂ ಇಪ್ಪತ್ತು ವರ್ಷವಿರಬಹುದು. ಹಿಂದೆ ಬಂದವನಲ್ಲ.

ವಾಸವ :—ಆ ದುಂಡುಗಣ್ಣಿನ ತರುಣ ?

ಗೌತಮಿ :—ಹ್ನು—ಹಾಗಾದರೆ ಅಮ್ಮಾಜಿಯ ದೃಷ್ಟಿಗೆ ಸಿಲುಕಿಬಿಟ್ಟಿದ್ದಾನೆ!

ವಾಸವ :—ಮನೆಯಲ್ಲಿ ತಂದೆತಾಯಿ ಇಲ್ಲವಂತೇನು ?

ಗೌತಮಿ :—ಏನೋ! (ನಗು)

ವಾಸವ :—ಸರಿ. ಬರಹೇಳು.

ಗೌತಮಿ :—ಇಲ್ಲಿಗೆ ?

ವಾಸವ :—ಹ್ನು !

[ಹೆಜ್ಜೆ ಕ್ಷಯಿಸುವುದು. ವಾಸವದತ್ತೆ ಪೂರ್ವೋಕ್ತನೃತ್ಯದ ರಾಗವನ್ನೆ ಗುಣುಗುಣಿಸತೊಡಗುವಳು. ಅಷ್ಟರಲ್ಲಿ ಎರಡು ಹೆಜ್ಜೆಗಳು ವೃದ್ಧಿಸುವುವು.]

ಗೌತಮಿ :—ಬಂದಿದ್ದಾರೆ, ಒಡತಿ.

ವಾಸವ :—ಸರಿ. [ಹೆಜ್ಜೆ ಕ್ಷಯಿಸುವುದು.] . . . . ಕುಳಿತುಕೊಳ್ಳಬಹುದು!

ತರುಣ :—(ಭಾವಾತಿರೇಕದ ಮೃದುಸ್ವರದಲ್ಲಿ) ವಾಸವದತ್ತೆ ! . . .

ವಾಸವ :—ಉಹ್ನು sss . . .

ತರುಣ :—ಎಷ್ಟು ಸುಂದರಳಾಗಿದ್ದೀಯೆ, ವಾಸವದತ್ತೆ !

ವಾಸವ :—(ತುಂಟ ಹುಡುಗಿಯಂತೆ ಪಕಪಕ ನಗುವಳು)

ತರುಣ :—ನಿಜವಾಗಿ ಹೇಳುತ್ತಿದ್ದೇನೆ, ವಾಸವದತ್ತೆ . . ಕೆಲವೇ ದಿನಗಳ ಹಿಂದೆ ಒಮ್ಮೆ ನಿನ್ನನ್ನು ನೋಡಿದೆ. ನಿನ್ನ ಅಲೌಕಿಕವಾದ ರೂಪು ಸ್ವಪ್ನಜಾಗೃತಿಗಳಲ್ಲಿ ನನ್ನನ್ನು ಎಡಬಿಡದೆ ಕಾಡಿತು........ಇಂದು ತಡೆಯಲಾಗದೆ ಹುಚ್ಚನಾಗಿ ಇಲ್ಲಿ ಓಡಿಬಂದಿದ್ದೇನೆ.

ವಾಸವ :—(ಕಥೆ ಕೇಳುವವಳಂತೆ) ಹ್ಞ !

ತರುಣ :—ನನ್ನ ಜೀವಮಾನದಲ್ಲಿಯ ಮೊದಲ ಸೋಲು ಇದು .ವಾಸವದತ್ತೆ, ಈ ನಗರದಲ್ಲಿನ ಅನೇಕ ಚೆಲುವಿಯರನ್ನು ನೋಡಿದ್ದೇನೆ. ಅವರಲ್ಲಿ ಎಷ್ಟೋಜನ ನನ್ನ ಒಲವಿಗಾಗಿ ಹಂಬಲಿಸಿ ಕೊರಗುತ್ತಿದ್ದಾರೆ........

ವಾಸವ :—ತುಂಬ ಶ್ರೀಮಂತರಿರಬೇಕು !

ತರುಣ :—ಶ್ರೀಮಂತಿಕೆ !–ಹ್ಞ–ನನ್ನ ಐಶ್ವರ್ಯವನ್ನು ಬಯಸಿದ್ದರೆ ಅವರು ಇಷ್ಟು ಹಂಬಲಿಸಬೇಕಿರಲಿಲ್ಲ. ನನ್ನ ಅಪಾರ ಐಶ್ವರ್ಯದಲ್ಲಿನ ಒಂದು ಅಲ್ಪಭಾಗದಲ್ಲಿ ಅವರೆಲ್ಲ ತೃಪ್ತರಾಗಿಬಿಡುತ್ತಿದ್ದರು........

ವಾಸವ :—ಹಾಗಾದರೆ, ನನ್ನಮೇಲಿನ ಕೃಪೆಯಿಂದ ಇಲ್ಲಿ ಬಂದಿರಬೇಕು !

ತರುಣ :—ಇಲ್ಲ ವಾಸವದತ್ತೆ. ನಿನ್ನ ಕೃಪೆಯನ್ನು ಬೇಡಿಬಂದ ಭಿಕ್ಷುಕ ನಾನು....ಅನೇಕ ಸುಂದರಿಯರು ನನಗಾಗಿ ಹಂಬಲಿಸಿ ಬಂದಾಗ ನಾನು ವಿಚಲಿತನಾಗಲಿಲ್ಲ. ನನ್ನನ್ನು ಕಾಪಾಡಲು ಆಗ ಅಹಂಕಾರ ವಿದ್ದಿತು........ಆದರೆ, ನಿನ್ನನ್ನು ನೋಡಿದ ಆ ಕ್ಷಣದಲ್ಲೆ ಮೊತ್ತ ಮೊದಲ ಬಾರಿಗೆ ನನ್ನಲ್ಲಿ ಆಸೆ ಪ್ರಜ್ವಲಿಸಿತು....

ವಾಸವ :—ಪಾಪ, ನನ್ನಿಂದಾಗಿ ಜೀವನದಲ್ಲಿ ನಿಮಗೆ ಮೊದಲ ಸೋಲು ಒದಗಿತು !

ತರುಣ :—....ಆದರೆ ಎಂತಹ ಉನ್ಮಾದಕಾರಿಯಾದ ಸೋಲು ! ಸರ್ವ ಜಡತೆಯನ್ನೂ ನಿರ್ನಾಮವಾಗಿಸಿದ ಸೋಲು !........ಇಂತಹ ಸೋಲು ಸಾವಿರಬಾರಿ ಬರಲಿ ಎನ್ನಿಸುತ್ತದೆ....ಪ್ರೇಮಿಯ ನಿಜವಾದ ಸುಖ ಈ ಸೋಲಿನಲ್ಲಿದೆ, ವಾಸವದತ್ತೆ ; ಈ ತೀವ್ರವಾದ

ಹಂಬಲದಲ್ಲಿದೆ; ಹೀಗೆ ಉನ್ಮತ್ತನಂತೆ ಹುಡುಕುತ್ತ ಓಡುವುದ ರಲ್ಲಿದೆ!

ವಾಸವ :—ಸೋತು ಹಂಬಲಿಸಿಯಾಯಿತು; ಉನ್ಮತ್ತನಂತೆ ಓಡುತ್ತ ಬಂದುದಾಯಿತು. ಈಗ ಪೂರ್ಣಸುಖಿಗಳು ನೀವು!

ತರುಣ :—ನಿನ್ನೆದುರಿನಲ್ಲಿ ನನಗೆ ಸುಖವಲ್ಲದೆ ಬೇರೆ ಏನುತೋರೀತು?

[ಒಂದು ಕ್ಷಣ ಮೌನ]

ವಾಸವ :—ಸರಿ, ನೀವು ಇಲ್ಲಿಂದ ಹೊರಡಬಹುದು–ನಾನು ಆಜ್ಞೆಮಾಡು ತ್ತೇನೆ.

ತರುಣ :—ವಾಸವದತ್ತೆ!....

ವಾಸವ :—ಹಾಗೆ ಆಜ್ಞೆಮಾಡಿದರೆ ಏನುಮಾಡುತ್ತೀರಿ?

ತರುಣ :—...ಮತ್ತೆ ತಪಸ್ಸುಮಾಡುತ್ತೇನೆ!

ವಾಸವ :—(ಮಗುವಿನ ಮೂರ್ಖಮುಗ್ಧತೆಯನ್ನು ಕಂಡ ತಾಯಿಯಂತೆ ನಗುವಳು.)

ತರುಣ :—ಆಗಲಿ,....ನನ್ನ ತಪಸ್ಸು ಫಲಿಸಿದ ಅನಂತರ ಮತ್ತೆ ಬರುತ್ತೇನೆ!

ವಾಸವ :—(ಸ್ವೇಚ್ಛೆಯಾಗಿ ನಕ್ಕು)....ಇದು ನನ್ನ ಆಜ್ಞೆ; ನೀವು ಇಂದು ಇಲ್ಲಿಯೇ ಇದ್ದು ಹೋಗಬೇಕು!

ತರುಣ :—(ಸುಖಾವೇಶದಿಂದ) ವಾಸವದತ್ತೆ! ವಾಸವದತ್ತೆ!!....

ವಾಸವ :—ಹ್ಣಾ! ಅಷ್ಟು ಬೇಗ ಉನ್ಮಾದಹೊಂದಬಾರದು! (ಮೃದು ವಾಗಿ ನಗುವಳು)

ತರುಣ :—(ಮಧುರವಾದ ಅತೀವ ಮೃದುಸ್ವರದಲ್ಲಿ) ಎಷ್ಟು ಸುಂದರಿ ಯಾಗಿದ್ದೀಯೆ, ವಾಸವದತ್ತೆ!

[ದೃಶ್ಯ ಪರಿವರ್ತನೆಯ ಸೂಚನೆ]

* * * *

ವಾಸವ :—ಗೌತಮಿ, ಎಡಗಾಲಿನ ನೂಪುರವನ್ನು ಸ್ವಲ್ಪ ಸಡಲಿಸು....ಹ್ಣಾ! ಸಾಕು....ನನ್ನ ಉತ್ತರೀಯವನ್ನು ತೆಗೆದುಕೊಂಡು ಬಾ.

ಗೌತಮಿ :—ನೀಲವರ್ಣದ ಉತ್ತರೀಯ?

ವಾಸವ :—ಅಲ್ಲ, ತಿಳಿಗೆಂಪಿನದು....ಎಲ್ಲಿ, ಆ ಮಣಿದರ್ಪಣವನ್ನು ಕೊಟ್ಟು ಹೋಗು....ಹಾಗೆಯೇ ಈ ದೀಪವನ್ನು ಸ್ವಲ್ಪ ದೊಡ್ಡದುಮಾಡು ....ಇನ್ನೂ ಸ್ವಲ್ಪ....ಹ್ಞ, ಹೋಗು.

[ಹೆಜ್ಜೆ ಕ್ಷಯಿಸುವುದು]

ವಾಸವ :—(ಮೃದುವಾಗಿ ನಕ್ಕು ತನ್ನಲ್ಲೆ) ಎಷ್ಟು ಸುಂದರಿಯಾಗಿದ್ದೀಯೆ ವಾಸವದತ್ತೆ ! (ಇನ್ನೂ ಮೃದುವಾಗಿ)....ಎಷ್ಟು ಸುಂದರಿಯಾಗಿ ದ್ದೀಯೆ........

[ಹೆಜ್ಜೆ ವೃದ್ಧಿಸುವುದು]

ಗೌತಮಿ :—ಉತ್ತರೀಯವನ್ನು ಹೊದೆಸಲೆ, ಅಮ್ಮಾಜಿ ?

ವಾಸವ :—ಹ್ಞ.

ಗೌತಮಿ :—ಈ ನೀಲವರ್ಣದ ಚೀನಾಂಬರ ನಿನಗೆ ತುಂಬ ಒಪ್ಪುತ್ತದೆ, ಅಮ್ಮಾಜಿ.

ವಾಸವ :—(ಮೆಯ್‌ಕುಲುಕಿಸಿ ದೀರ್ಘವಾಗಿ ಮೃದುವಾಗಿ ನಗುವಳು)

ಗೌತಮಿ :—ಆ ಸೀರೆಗೆ ಈ ಉತ್ತರೀಯ ಎಷ್ಟು ಸೊಗಸುತ್ತದೆ !

ವಾಸವ :—(ವೈಯ್ಯಾರದಿಂದ) ನಿಜವಾಗಿ ?

ಗೌತಮಿ :—ನೀನು ಇಷ್ಟು ಚೆನ್ನಾಗಿ ಎಂದೂ ಸಿಂಗರಿಸಿಕೊಂಡಿರಲಿಲ್ಲ, ಅಮ್ಮಾಜಿ ...ಇಂದು ಯಾರಾದರೂ ಬರುತ್ತಾರೇನು ?

ವಾಸವ :—ಏನೋ !

ಗೌತಮಿ :—ಆ ದುಂಡುಗಣ್ಣಿನ ತರುಣ........

ವಾಸವ :—(ತಾತ್ಸಾರವೆಂಬಂತೆ) ನನಗೇಕೆ ಆ ತರುಣನ ಚಿಂತೆ ?

ಗೌತಮಿ :—ಆಹಾಹಾ !....ನನಗೆ ಗೊತ್ತು, ಅಮ್ಮಾಜಿಯಮನಸ್ಸು !.... ಏಕೆ, ಆ ತರುಣ ಸುಂದರನಾಗಿಲ್ಲವೆ, ಅಮ್ಮಾಜಿ !

ವಾಸವ :—ನಿನಗೆ ಹೇಗೆ ತೋರುತ್ತದೆ ?

ಗೌತಮಿ :—ತುಂಬ ಚೆನ್ನಾಗಿದ್ದಾನೆ, ಅಮ್ಮಾಜಿ. ಈ ಧಾರಾನಗರದಲ್ಲಿ ಅವನಷ್ಟು ಸುಂದರವಾಗಿರುವ ತರುಣರನ್ನು ನಾನು ನೋಡಿಯೇ ಇಲ್ಲ.

ವಾಸವ :—ಪ್ರೇಮಿಸುವುದಕ್ಕೆ ಆತನಿಗಿರುವ ಒಂದೇ ಅರ್ಹತೆ, ಅದು !

ಗೌತಮಿ :—ಎಷ್ಟು ಹಟ, ಎಷ್ಟು ಧೈರ್ಯ ಆತನಿಗೆ !
ವಾಸವ :—ಎರಡನೆಯ ಅರ್ಹತೆ, ಅದು.
ಗೌತಮಿ :—ತುಂಬ ಮುಗ್ಧಮನಸ್ಸು.
ವಾಸವ :—ಕೇವಲ ಭಾವಾತಿರೇಕದ ಹಾಲುಹಸುಳೆ! (ಪೈಜಣದ ಸದ್ದು ಆಕೆ ಎದ್ದುದನ್ನು ಸೂಚಿಸುತ್ತದೆ)
ಗೌತಮಿ :—....ಹಾಗಾದರೆ, ಇಂದು ಆ ತರುಣ ಬರುವುದಿಲ್ಲ ?....
ವಾಸವ :—ಯಾರು ಬಂದರೆ ನನಗೇನು?....ಎಲ್ಲಿ, ನನ್ನ ಸ್ವರ್ಣವರ್ಣದ ಕೈದೀವಿಗೆಯನ್ನು ತೆಗೆದುಕೊಂಡು ಬಾ.
ಗೌತಮಿ :—ಕೈದೀವಿಗೆ ?
ವಾಸವ :—ಹೌದು.
ಗೌತಮಿ :— ಎಲ್ಲಿಯಾದರೂ ಹೋಗಬೇಕೆ, ಅಮ್ಮಾಜಿ ?
ವಾಸವ :—ಹ್ಞ........
ಗೌತಮಿ :—ನಾನೂ ಬರಬೇಕೇನು ?
ವಾಸವ :—ಬೇಡ. ಒಬ್ಬಳೇ ಹೋಗುತ್ತೇನೆ.
ಗೌತಮಿ :—ಸಂಚಾರ ?
ವಾಸವ :—ಹ್ಞ ! ಸಂಚಾರ........ಸಂಗಡ ಅಭಿಸಾರ !
ಗೌತಮಿ :—(ನಕ್ಕು) ಅಭಿಸಾರ!....ಏಕೆ, ಅಮ್ಮಾಜಿ, ಧಾರಾನಗರದ ಅನೇಕ ಶ್ರೀಮಂತರು ನಿನ್ನನ್ನು ಹುಡುಕುತ್ತ ಬರುತ್ತಾರೆ. ನಿನ್ನ ಸಹವಾಸಕ್ಕಾಗಿ ತಮ್ಮ ಐಶ್ವರ್ಯವನ್ನೆಲ್ಲ ಧಾರೆಯೆರೆಯುತ್ತಾರೆ....
ವಾಸವ :—ಅಸಹ್ಯಮೃಗಗಳು !—ಅವರ ಐಶ್ವರ್ಯ ಯಾರಿಗೆ ಬೇಕು ?
ಗೌತಮಿ:—ಬೇಕೆನ್ನುವವರನ್ನು ಇಲ್ಲಿಗೇ ಕರೆಸಿಕೊಳ್ಳಬಹುದಲ್ಲ, ಅಮ್ಮಾಜಿ ....ಆ ತರುಣನನ್ನೆ ಕರೆದು ಬರಲೇನು ?
ವಾಸವ :—ಧಾರಾನಗರಮಾತ್ರವಲ್ಲ, ಈ ರಾಜ್ಯದ ಅನೇಕ ಭಾಗಗಳಿಂದ ನನ್ನನ್ನು ಹುಡುಕಿ ಬರುತ್ತಾರೆ.
ಗೌತಮಿ :—ಅದನ್ನೇ ಹೇಳುತ್ತಿದ್ದೇನೆ, ನಾನು.
ವಾಸವ :—ಹಾಗೆ ಹುಡುಕುತ್ತ ಬರುವುದರಲ್ಲಿಯೇ ಅವರಿಗೆ ಆನಂದ.
ಗೌತಮಿ :—ಎಂದರೆ........

ವಾಸವ :—ಹುಡುಕುತ್ತ ಹೋಗುವುದರಲ್ಲೆ ಒಲವಿನ ಸುಖ!

ಗೌತಮಿ :—ಓಹ್, ಆ ತರುಣನಿಂದ ಕಲಿತ ಪಾಠವಿರಬೇಕು, ಇದು. (ನಗು)

ವಾಸವ :—ನನ್ನ ಕೈದೀವಿಗೆ—

ಗೌತಮಿ :—ತರುತ್ತೇನೆ, ಅಮ್ಮಾಜಿ.

[ಹೆಜ್ಜೆ ಕ್ಷಯಿಸುವುದು]

ವಾಸವ :—(ತನ್ನಲ್ಲೇ ಇಬ್ಬರನ್ನು ಕಲ್ಪಿಸಿಕೊಂಡು, ಒಬ್ಬರು ಇನ್ನೊಬ್ಬರಿಗೆ ಹೇಳುವರೋ ಎಂಬಂತೆ).... ನೀನು ತಿಳಿದಷ್ಟು ಮೂರ್ಖನಲ್ಲ, ಆ ತರುಣ!....

[ಹೆಜ್ಜೆ ವೃದ್ಧಿಸುವುದು]

ಗೌತಮಿ :—ಈ ಶ್ರಾವಣರಾತ್ರಿಯಲ್ಲಿ ಅಭಿಸಾರ ಹೊರಡುವುದೆ, ಅಮ್ಮಾಜಿ?

ವಾಸವ :—ಶ್ರಾವಣವಾದರೇನು ಚೈತ್ರವಾದರೇನು ?

ಗೌತಮಿ :—ಇಂದು ಅಮಾವಾಸ್ಯೆ, ಕಗ್ಗತ್ತಲು.

ವಾಸವ :—ಹ್ಞ.

ಗೌತಮಿ :—ಹೊರಗೆ ಮಳೆಬರುವ ಸೂಚನೆ ಕಾಣಿಸುತ್ತದೆ, ಅಮ್ಮಾಜಿ.

ವಾಸವ :—ಒಳ್ಳೆಯದೇ ಆಯಿತು. ನನ್ನ ಕೂಡ ಅದೂ ಬರುತ್ತದೆ! (ನಗು)

ಗೌತಮಿ :—ಅದಕ್ಕೂ ಅಭಿಸಾರದ ಅಭಿಲಾಷೆಯಿರಬೇಕು! (ನಗು)

ವಾಸವ :—ನೀನು ಮನೆಯಲ್ಲೆ ಇರು. [ಪೈಜಣಗಳ ಸದ್ದು ಕ್ಷಯಿಸುವುದು]

ಗೌತಮಿ :—ಶ್ರಾವಣರಾತ್ರಿಯಲ್ಲಿ ಅಭಿಸಾರ!....ಎಂತಹ ಹುಚ್ಚು! (ನಗು)

[ದೃಶ್ಯದ ಪರಿವರ್ತನೆಯ ಸೂಚನೆ]

* * * *

[ಮಳೆ ಒಂದೇಸಮನಾಗಿ ಉಸಿರೇರಿಸಿ ಸುರಿಯುತ್ತಿರುವ ಸದ್ದು; ಸಂಗಡ ಗುಡುಗು ಸಿಡಿಲುಗಳ ಆರ್ಭಟಿ. ಧ್ವನಿಗ್ರಾಹಿ ದಾರಿಯಲ್ಲಿ ಸಾಗುತ್ತಿರುವ ಎರಡು ಹೆಜ್ಜೆಗಳನ್ನು ಹಿಂಬಾಲಿಸುತ್ತಿದೆ.]

ನಾಗರಿಕ ತರುಣ :—ಅಬ್ಬ! ಎಂತಹ ಮಳೆ; ಎಂತಹ ಘೋರಾಂಧಕಾರ!....ಹ್ಞಾ, ಮೆಲ್ಲಗೆ....ಮತ್ತೆ ಎಡವಿ ಬಿದ್ದೀಯೆ!

ಅತನ ಜೊತೆಗಾತಿ :—ನನಗೆ ಭಯವಾಗಿಬಿಟ್ಟಿತು. ಎಲ್ಲಿಯಾದರೂ ದೆವ್ವವೊ ಭೂತವೊ ಎಂದು....

ನಾಗರಿಕ :—(ನಕ್ಕು) ....ಭಿಕ್ಷುಕನೇ ಸರಿ. ಇಲ್ಲದಿದ್ದರೆ ಈ ನಡುರಾತ್ರಿಯಲ್ಲಿ ಇಲ್ಲೇನು ಮಾಡುತ್ತಾನೆ?

ಜೊತೆಗಾತಿ :—ಅಥವಾ ನಮ್ಮ ಹಾಗೆಯೇ....

ನಾಗರಿಕ :—ಏನೋ, ಮಿಂಚು ಬೆಳಕಿನಲ್ಲಿ ಸರಿಯಾಗಿ ಕಾಣಿಸಲೂ ಇಲ್ಲ.

ಜೊತೆಗಾತಿ :—ಓ, ಆ ಹಾದಿಯಿಂದ ಯಾರೋ ಬರುತ್ತಿದ್ದಾರೆ, ದೀಪ ಹಿಡಿದು.

ನಾಗರಿಕ :—ಹೆಂಗಸು! ಅಬ್ಬ, ಏನು ವೈಯ್ಯಾರ!....ಎಲ್ಲೊ ಹೊರಟರಬೇಕು ರಾತ್ರಿ ಸಂಚಾರ.

[ಗಾಳಿ ಭರ್ರೆಂದು ಬೀಸುತ್ತದೆ.]

ನಾಗರಿಕ :—ಅಬ್ಬಬ್ಬ, ಮೆಯ್ ಕೊರೆಯುತ್ತಿದೆ!– ಓ, ಆಕೆಯ ದೀಪವೂ ಆರಿಹೋಯಿತು.

ಜೊತೆಗಾತಿ :—ಈಚೆ ಬನ್ನಿ....ಎಲ್ಲಿಯಾದರೂ ಮೆಯ್‌ಮೇಲೆ ಹಾಯ್ದು ಬಿಟ್ಟಾಳು!

[ಈ ಎರಡು ಹೆಜ್ಜೆಗಳು ಕ್ಷಯಿಸುತ್ತಿರಲು, ಪೈಜಣದ ಹೆಜ್ಜೆ ವೃದ್ಧಿಸುವುದು]

ವಾಸವ :—ಅಬ್ಬ! ಎಂತಹ ಮಳೆ! ಘೋರಾಂಧಕಾರ!....(ತನಗೆ ತಾನೇ:) ' ಆ ತರುಣನ ಹಾಗೆಯೇ ಉನ್ಮತ್ತಳಾಗಿಬಿಟ್ಟಿದ್ದೀಯೆ ನೀನು!' (ತನ್ನಲ್ಲಿಯೇ ನಗುವಳು)....

[ಮುಂದುವರಿಯುತ್ತಿರುವ ಪೈಜಣದ ಸದ್ದು ಒಮ್ಮೆಲೆ ನಿಂತು ಎಡವಿದುದನ್ನು ಸೂಚಿಸುತ್ತದೆ.]

ವಾಸವ :—ಇದೇನಿದು, ಹಾದಿಗಡ್ಡವಾಗಿ?....

ಉಪಗುಪ್ತ :—ಯಾರು?....

ವಾಸವ :—ಓಹ್, ಯಾವುದೋ ಮನುಷ್ಯಪ್ರಾಣಿ!–ಏಯ್, ಮೂರ್ಖ! ಏಳು. ಮಾರ್ಗಮಧ್ಯದಲ್ಲೇಕೆ ಮಲಗಿದ್ದೀಯೆ?

ಉಪಗುಪ್ತ :—ತಾಯಿ, ಮರದ ಬುಡದಲ್ಲಿ ಮಲಗಿದ್ದೇನೆ ನಾನು. ಇದು

ಮಾರ್ಗವಲ್ಲ. [ಗುಡುಗಿನ ಸದ್ದು.]....ಮಿಂಚಿನ ಬೆಳಕಿನಲ್ಲಾದರೂ ಕಾಣಿಸಿತೆ?–ಅದು ಮಾರ್ಗ.

ವಾಸವ :—ಕ್ಷಮಿಸಿ....ಯಾರೋ ಭಿಕ್ಷುಕನೆಂದು ತಿಳಿದು ಒರಟಾಗಿ ಮಾತನಾಡಿದೆ.

ಉಪಗುಪ್ತ:—ನಿನ್ನ ಊಹೆ ತಪ್ಪಲಿಲ್ಲ, ತಾಯಿ. ನಿಜವಾಗಿಯೂ ನಾನೊಬ್ಬ ಭಿಕ್ಷು.

ವಾಸವ:—ಸುಳ್ಳು! ಸುಳ್ಳು ಹೇಳುತ್ತಿದ್ದೀರಿ ನೀವು. ನಿಮ್ಮ ಈ ಸುಂದರ ದೇಹವನ್ನು ನೋಡಿದರೆ ನನಗೆ ತಿಳಿಯದೆ?....(ಮೃದುವಾಗಿ) ನಿಜವಾಗಿ ಹೇಳಿ, ಯಾರು ನೀವು? ಇದೇಕೆ ಈ ಛದ್ಮವೇಷ ಧರಿಸಿದ್ದೀರಿ?

ಉಪಗುಪ್ತ :—ನಾನೇಕೆ ಅನೃತವನ್ನಾಡಲಿ ತಾಯಿ?

[ಒಂದು ಕ್ಷಣ ಮೌನ]

ವಾಸವ :—....ಎಂತಹ ಮಳೆ!....ಎಂತಹ ಘೋರಾಂಧಕಾರ!

ಉಪಗುಪ್ತ :—ಹೌದು. ಶ್ರಾವಣಮಾಸದ ಅಮಾವಾಸ್ಯೆಯ ರಾತ್ರಿ.

ವಾಸವ :—ಈ ಎಡಬಲದಲ್ಲಿ ಮನುಷ್ಯರ ಸುಳಿವಿಲ್ಲ....

ಉಪಗುಪ್ತ :—ತಾಯಿ, ಎಲ್ಲಿಯೋ ಹೊರಟಿದ್ದೀಯೆ....

ವಾಸವ :—(ಅರ್ಥಪೂರ್ಣವಾಗಿ ನಗುವಳು)

ಉಪಗುಪ್ತ :—ತೊಂದರೆಯಾಯಿತೇನೋ, ಕ್ಷಮಿಸು....ಹೋಗುತ್ತೀಯಾ?

ವಾಸವ :—ನಾನು ಯಾರು ತಿಳಿಯಿತೆ?

ಉಪಗುಪ್ತ :—ನನಗೆ ಹೇಗೆ ತಿಳಿಯಬೇಕು?

ವಾಸವ :—ಈ ನಗರದ ರಾಜನರ್ತಕಿ, ವಾಸವದತ್ತೆ!

ಉಪಗುಪ್ತ :—(ಕುತೂಹಲರಹಿತನಾಗಿ) ಹಾಗೇನು?

ವಾಸವ :—ಎಲ್ಲಿ ಹೊರಟಿದ್ದೇನೆ–ಊಹಿಸುತ್ತಿರಾ?

ಉಪಗುಪ್ತ :—(ಮೌನ)

ವಾಸವ :—ಅಭಿಸಾರ!

ಉಪಗುಪ್ತ :—ಒಳ್ಳೆಯದು. ಹೋಗು, ತಾಯಿ.

ವಾಸವ :—ನನ್ನ ಅಭಿಸಾರ ಪೂರ್ಣವಾಯಿತು ! [ಗುಡುಗು ಆಬ್ಬರಿಸುವುದು]
....ಅಯ್ಯೋ !!....

ಉಪಗುಪ್ತ:—ತಾಯಿ....

ವಾಸವ:—ಅಯ್ಯೋ, ನನಗೆ ಭಯವಾಗುತ್ತಿದೆ....ಒಂದು ಬಾರಿ ಭೂಮಿಯೇ ಬಿರಿದು ಹೋದಂತೆ ತೋರಿತು....

ಉಪಗುಪ್ತ:—ಇನ್ನು ಹೊರಡುತ್ತೀಯಾ?

ವಾಸವ:—ಈ ಅಂಧಕಾರದಲ್ಲಿ ನಾನೊಬ್ಬಳೇ ಹೇಗೆ ಹೋಗಲಿ?

ಉಪಗುಪ್ತ:—ಇಷ್ಟು ದೂರ ಇದೇ ಅಂಧಕಾರದಲ್ಲಿ ಒಬ್ಬಳೇ ಬರಲಿಲ್ಲವೆ?

ವಾಸವ:—....ಸುಮ್ಮನೆ ವಿನೋದಮಾಡಬೇಡಿ. ನಡೆಯಿರಿ, ನಮ್ಮ ಮಹಲಿಗೆ ಹೋಗೋಣ.

ಉಪಗುಪ್ತ:—ತಾಯಿ, ನನ್ನ ಭುಜವನ್ನು ಬಳಸಿದ ನಿನ್ನ ತೋಳುಗಳ ಕಂಪನದಿಂದಲೇ ಅರ್ಥವಾಗುತ್ತಿದೆ....ಕ್ಷಮಿಸು, ನಾನು ನಿನ್ನ ಕೂಡ ಬರಲಾರೆ.

ವಾಸವ:–ಮಹಲಿಗೆ ಬೇಡ, ಕುಂಜವನದ ವಿಹಾರಮಂದಿರಕ್ಕೇ ಹೋಗೋಣ.

ಉಪಗುಪ್ತ:— (ಗಂಭೀರನಾಗಿ) ಕ್ಷಮಿಸು, ತಾಯಿ .... ಈಗ ಬೇಡ. ಇನ್ನೊಮ್ಮೆ ನಿನ್ನೆಡೆಗೆ ಬರುತ್ತೇನೆ....ನಿನಗೆ ಇಂದಿಗಿಂತ ಹೆಚ್ಚಿನ ಅಗತ್ಯ ಒದಗಿದಾಗ ನಾನೇ ನಿನ್ನನ್ನು ಹುಡುಕಿಕೊಂಡು ಬರುತ್ತೇನೆ....ಬರುತ್ತೇನೆ, ತಾಯಿ.

[ಹೆಜ್ಜೆಯ ಸದ್ದು ಕ್ಷಯಿಸುವುದು.]

ವಾಸವ:—ಸ್ವಾಮಿ, ನಾನು........

[ಗುಡುಗಿನ ಆರ್ಭಟದಲ್ಲಿ ಮಾತು ಮುಳುಗಿಹೋಗುವುದು. ದೃಶ್ಯಪಲ್ಲಟವಾದ ಸೂಚನೆ.]

* * * *

ವಾಸವ:—ಕಮಲದಂತಹ ಮುಖ, ಅಗಲವಾದ ಕಣ್ಣುಗಳು, ಅಲೆಯಲೆಯಾಗಿ ಹರಡುತ್ತಿರುವ ಮಂದಹಾಸ, ವಿಶಾಲ ವಕ್ಷಸ್ಥಲ— ಎಲ್ಲವೂ ನನ್ನ ಕಣ್ಣಿಗೆ ಕಟ್ಟಿದಂತಿದೆ, ಗೌತಮಿ.

ಗೌತಮಿ:—ವಿಚಿತ್ರ ಪುರುಷ!

ವಾಸವ:—ಪ್ರೇಮದ ಮಂಗಳ ದೀಪಗಳಂತೆ ಕತ್ತಲಿನಲ್ಲೂ ಬೆಳಗುತ್ತಿದ್ದವು, ಆ ಕಣ್ಣುಗಳು!

ಗೌತಮಿ:—(ವ್ಯಂಗ್ಯವಾಗಿ) ಊ್ಞ ಹ್ಞೂss?....

ವಾಸವ:–ಇನ್ನೊಮ್ಮೆ, ಆತ ತಾನಾಗಿಯೇ ನನ್ನಲ್ಲಿ ಬರುವನಂತೆ, ಗೌತಮಿ.

ಗೌತಮಿ:—ಅಭಿಸಾರಕ್ಕೆ ಅಭಿಸಾರ—ತೀರಿಸುವ ಸಲುವಾಗಿಯೇನು?.... ಎಂದು ಬರುತ್ತಾನೋ?

ವಾಸವ:—ನನ್ನ ಹಂಬಲ ತೀವ್ರವಾಗಬೇಕು, ನನ್ನ ತಪಸ್ಸು ವೃದ್ಧಿಸಬೇಕು—ಆಗ.

ಗೌತಮಿ:—ನೀನಿನ್ನೂ ಹಸುಳೆ, ಅಮ್ಮಾಜಿ! ಅವನ ಮಾತುಗಳನ್ನು ಪರಮ ಸತ್ಯವೆಂದು ನಂಬಿಬಿಟ್ಟಿಯಾ?

ವಾಸವ:—ಕ್ಷಣಕ್ಷಣದಲ್ಲೂ ಹುಯ್ಯಲಿಡುತ್ತಿರುವ ಆತನ ಧೀರವಾಕ್ಯಗಳಲ್ಲಿ ಅವಿಶ್ವಾಸ ಅಸಾಧ್ಯ, ಗೌತಮಿ.

ಗೌತಮಿ:—ಅಮ್ಮಾಜಿ, ಬರಿದೆ ಹುಚ್ಚಳಾಗಬೇಡ. ಆ ಒಬ್ಬ ಮೂರ್ಖ ಓಡಿಹೋದರೆ ನಿನಗೆ ಅವಮಾನವೆ? ನಿನ್ನ ಸಲುವಾಗಿ ಎಷ್ಟು ಜನ ಎಡಬಿಡದೆ ಕಾಯುತ್ತಿದ್ದಾರೆ; ನಿನ್ನನ್ನು ಸೇರುವ ಸಲುವಾಗಿ ಎಷ್ಟೊಂದು ಐಶ್ವರ್ಯ ಈ ಮಹಲಿನ ಬಾಗಿಲಲ್ಲಿ ಹೊರಳುತ್ತಿದೆ!

ವಾಸವ:—(ಮೌನ)

ಗೌತಮಿ:–ಸುಮ್ಮನೆ ಇಲ್ಲದುದನ್ನು ಕಲ್ಪಿಸಿಕೊಂಡು ಹುಚ್ಚಳಾಗುತ್ತಿದ್ದೀಯೆ, ಅಮ್ಮಾಜಿ....ಈ ಅಲ್ಪಘಟನೆಯಿಂದ ಇಷ್ಟು ವಿಚಲಿತಳಾಗುವುದೆ? ....ನಿನ್ನ ಪ್ರವೃತ್ತಿಯೇ ಬದಲಾಗಿ ಹೋಗಿದೆ!

ವಾಸವ:—(ಮೌನ)

ಗೌತಮಿ:—ಇಂತಹ ಅತಿರೇಕದಿಂದ ಪ್ರಯೋಜನವಿಲ್ಲ, ಅಮ್ಮಾಜಿ....

ವಾಸವ:—....ನೀನು....ನಿನಗೆ ಏನೂ ತಿಳಿಯದು. ಶುದ್ಧ ಪಾಷಾಣ! ತೊಲಗಿಹೋಗು ಇಲ್ಲಿಂದ.

ಗೌತಮಿ:—(ಕಂಪಿಸುವ ಸ್ವರದಲ್ಲಿ) ಇದೇನು, ಅಮ್ಮಾಜಿ. ನನ್ನ ಮೇಲೂ ಕೋಪವೆ? ನಿನ್ನ ಒಳಿತನ್ನಲ್ಲದೆ ನನ್ನ ಜೀವಮಾನದಲ್ಲಿ ಬೇರೊಂದನ್ನು ಬಯಸಲಿಲ್ಲ, ಅಮ್ಮಾಜಿ.

ವಾಸವ:—ಗೌತಮಿ....(ಗದ್ಗದ ಕಂಠಳಾಗುವಳು. ಒಂದು ಕ್ಷಣಮೌನ.)

ಗೌತಮಿ:—ಹೋಗಲಿ. ಅದನ್ನು ಕುರಿತು ಮಾತನಾಡುವುದಿಲ್ಲ, ಅಮ್ಮಾಜಿ. ನಿನ್ನ ಇಚ್ಛೆ.

[ದೂರದಲ್ಲಿ ಡಂಗುರದ ಸದ್ದು ಕೇಳುವುದು. ಇಬ್ಬರೂ ಅತ್ತ ಕಿವಿಗೊಟ್ಟಿರಲು ಸದ್ದು ವೃದ್ಧಿಸುತ್ತಬಂದು ಡಂಗುರದವನ ಮಾತು ಕೇಳುವುದು:

ಡಂಗುರದವ:—ನಗರದಲ್ಲಿ ಸಿಡುಬಿನ ಉಪದ್ರವ ಉಂಟಾಗಿದೆ; ಎಲ್ಲರೂ ಎಚ್ಚರಿಕೆಯಿಂದಿರಬೇಕು; ಈ ಮಾರಿ ಯಾರಿಗೆ ಸೋಕಿದರೂ ಅವರನ್ನು ಊರ ಹೊರಗಿನ ಬೇವಿನತೋಪಿನಲ್ಲಿರುವ ಧರ್ಮಶಾಲೆಯಲ್ಲಿ ಬಿಟ್ಟುಬರಬೇಕು—ಅರಸರ ಆಜ್ಞೆಯಾಗಿದೆ.]

ವಾಸವ:—(ಮೆಯ್‌ನಡುಗಿ) ಆ್ಞ! ಸಿಡುಬು!!

ಗೌತಮಿ:—ಅದೇಕೆ ಅಷ್ಟು ಬೆದರುತ್ತೀಯೆ, ಅಮ್ಮಾಜಿ?....ಭೂಮಿಯ ವಿಸ್ತೀರ್ಣವೇ ಸಾಲದಷ್ಟು ಹೆಚ್ಚುತ್ತಿರುವ ಜನ ಹೀಗಾದರೂ ಕ್ಷಯವಾಗದಿದ್ದರೆ ದೇವರು ಇವರಿಗಾಗಿ ಹೊಸ ಲೋಕವನ್ನೆ ಸೃಷ್ಟಿಸಬೇಕಾದೀತು!

ವಾಸವ:—ಸ್ವಚ್ಛತೆಯನ್ನರಿಯದ ಮೂರ್ಖಜಂತುಗಳು!....ರೋಗ ಹರಡದೆ ಇನ್ನೇನಾಗುತ್ತದೆ?....ಅದೇಕೋ, ಸಿಡುಬು ಎಂದು ಕೇಳಿದೊಡನೆ ನನ್ನ ಮೆಯ್ಯಲ್ಲಿ ಮಿಂಚಿನಹೊಳೆ ಹರಿದಂತಾಯಿತು!

ಗೌತಮಿ:—ಇಂತಹ ಮಾರಿಗೆ ಭೀತಳಾಗಬಾರದು, ಅಮ್ಮಾಜಿ. ಹೆದರುವವರನ್ನೆ ಹುಡುಕುತ್ತಿರುವುದಂತೆ ಮಾರಿ!....(ಕ್ಷಣ ತಡೆದು)....ಅಮ್ಮಾಜಿ, ಮುಂದಿನ ಹುಣ್ಣಿಮೆಯದಿನ ನಗರದಲ್ಲಿ ಶಾರದೋತ್ಸವ ನಡೆಯುವುದಂತೆ. ಅಲ್ಲಿ ನಿನ್ನ ನರ್ತನ ನಡೆಯಬೇಕೆಂದು ಶ್ರೀಮಂತರೆಲ್ಲ ಹೇಳಿಕಳುಹಿಸಿದ್ದಾರೆ.

ವಾಸವ:—ನನಗೆ ಇಚ್ಛೆಯಿಲ್ಲ, ಗೌತಮಿ.

ಗೌತಮಿ:—ಅದೂ ಬೇಡ ಎನ್ನುತ್ತೀಯಾ, ಅಮ್ಮಾಜಿ?

ವಾಸವ:—....ನಾನಿನ್ನು ವಿಶ್ರಾಂತಿ ಹೊಂದಬೇಕು. ನೀನು ಹೋಗಬಹುದು—ಹಾಗೆಯೇ, ಅವರಿಗೆ ತಿಳಿಸು, ನರ್ತನಕ್ಕೆ ಒಪ್ಪಿಕೊಂಡಿದ್ದಾಳೆ—ಎಂದು.

ಗೌತಮಿ :—ಆಗಲಿ, ಅಮ್ಮಾಜಿ.

[ಹೆಜ್ಜೆ ಕ್ಷಯಿಸುವುದು. ದೃಶ್ಯಪರಿವರ್ತನೆ]

* * * *

[ಮೊರೆದು ಮಗಚುವ ಸಮುದ್ರತರಂಗಳಂತೆ ಸತ್ತ್ವ ವಾದ್ಯಸ್ವನ ಏರಿ ಏರಿ ಬರುತ್ತದೆ. ಒಮ್ಮೆ ಅದರ ಮೊರೆತ ಇಳಿಯುತ್ತಿರಲು ಯುವಕ ಯುವತಿಯರ ಉತ್ಸಾಹದ ನಗು ಗದ್ದಲ ತೆರೆತೆರೆಯಾಗಿ ಉಕ್ಕುತ್ತದೆ. ಅನಂತರ, ಮುನ್ನೆಲೆಯ ರಂಗದ ಏಕಾಂತದಲ್ಲಿ ಯುವಕ ಯುವತಿಯರ ಜೋಡಿ, ಒಂದಾದಮೇಲೆ ಒಂದು, ಬಂದು ಹೋಗುತ್ತದೆ. ಅವರ ಮಾತು ಆರಂಭವಾಗಲು ವಾದ್ಯಸ್ವನದ ಇಳಿತವೂ, ಅವರ ನಿಷ್ಕ್ರಮಣದೊಂದಿಗೆ ಅದರ ಭರತವೂ—ಈ ಪ್ರಣಯಮಾಲಿಕೆಯ ಹಿಂದೆರೆಯಂತೆ-ಒದಗುತ್ತದೆ :]

ಯುವಕ ೧ :—ಈದಿನ ವಾಸವದತ್ತೆಯ ನರ್ತನವಿದೆ, ಮಂಜರಿ.

ಯುವತಿ ೧ :—ನರ್ತನವೇನು ?—ನಾನೇ ಮಾಡುತ್ತೇನೆ, ಬಾ. ಎಲ್ಲಿಯಾದರೂ ಏಕಾಂತಸ್ಥಳಕ್ಕೆ ಹೋಗೋಣ.

ಯುವಕ ೧ :—ಏಕಾಂತಸ್ಥಳದಲ್ಲಿ ನರ್ತನವೇಕೆ? (ನಗು)

[ನಿಷ್ಕ್ರಮಣ]

ಯುವಕ ೨ :—[ಪ್ರವೇಶ] ಅಲ್ಲಿ ನೋಡು—ಶಾರದಚಂದ್ರ ಮರೆಯಲ್ಲಿ ನೋಡಿ ನಗುತ್ತಿದ್ದಾನೆ!

ಯುವತಿ ೨ :—ಕೈಬಿಡು, ದೇವಚರಣ. ನಾನು ಮನೆಗೆ ಹೋಗಬೇಕು.

ಯುವಕ ೨ :—ಮನೆಗೆ ಹೋಗಬೇಕು! ಇಷ್ಟುಬೇಗ! ಸಾಧ್ಯವೇ ಇಲ್ಲ.

ಯುವತಿ ೨ :—ಇಲ್ಲೇನು ಮಾಡಲಿ ನಾನು?

ಯುವಕ ೨ :—ನಾನು ಕೊಡುವ ಶರತ್‌ಚಂದನವನ್ನು ಕೊಂಡು ಅದಕ್ಕೆ ಬದಲು ಮೆಚ್ಚುಕೊಡಬೇಡವೆ?

ಯುವತಿ ೨ :—(ವೈಯ್ಯಾರದಿಂದ) ಊ್ಞ....

[ನಿಷ್ಕ್ರಮಣ]

ಯುವಕ ೩ :—[ಪ್ರವೇಶ] ಇಗೊ, ಈ ಪುಷ್ಪಮಂಜರಿ-ಶರತ್‌ಕನ್ಯೆ ಅರಳಿಸಿ

ತಂದ ಹೂಗಳನ್ನು ಕೊಂಡು ನಾನೇ ಕಟ್ಟಿತಂದಿದ್ದೇನೆ....ಎಲ್ಲಿ, ನಿನ್ನ ಮುಡಿ....

[ಚುಂಬನದ ಸದ್ದು]

ಯುವತಿ ೩ :—(ಹುಸಿಮುನಿಸಿನಿಂದ)....ನಡೆಯಾಚೆ. ಇದಕ್ಕೇ ನೀನು ಹೂ ಮುಡಿಸುತ್ತೇನೆಂದದ್ದು.

[ನಗು ; ನಿಷ್ಕ್ರಮಣ. ಮತ್ತೊಮ್ಮೆ ವಾದ್ಯಸ್ವನ ಹಿನ್ನೆಲೆಗೆ ಸರಿಯಲು ವೀಣೆ ಮತ್ತು ಮೃದಂಗಗಳ ಧ್ವನಿ ವಿಜೃಂಭಿಸುತ್ತದೆ; ಅದಕ್ಕೆ ಹೊಂದಿ ನರ್ತನ. ಕ್ಷಣ ಕಳೆಯಲು ಗುಂಪಿನ ಒಂದು ಮೂಲೆಯಿಂದ ಗಲಿಬಿಲಿಯುಂಟಾದ ಸೂಚನೆಯಾಗಿ ಮರುಕ್ಷಣದಲ್ಲಿ ಕಿವಿಯಿಂದ ಕಿವಿಗೆ ಮಾತುಗಳು ಹಾರಾಡುತ್ತವೆ: 'ವಾಸವದತ್ತೆಯ ನರ್ತನವಿಲ್ಲ!,' 'ಆಕೆ ಅಸ್ವಸ್ಥಳಾಗಿರುವಳಂತೆ!', 'ಸಿಡುಬು?', 'ಯಾರುಬಲ್ಲರು?', 'ಎಲ್ಲವೂ ನಟನೆ!' ಇತ್ಯಾದಿ. ಪುನಃ ವಾದ್ಯ, ಪುನಃ ನರ್ತನ. ಶರತ್‌ಕ್ರೀಡೆಯ ಆನಂದ ಕೋಲಾಹಲದಿಂದ ಹಿಂದೆ ಸರಿದು ಶಬ್ದಗ್ರಾಹಿ ಮತ್ತೆ ಏಕಾಂತ ಸ್ಥಳವೊಂದಕ್ಕೆ ಮುಖಕೊಡುತ್ತದೆ.]

ಯುವಕ ೪ :—(ಭಾರವಾದ ದನಿಯಲ್ಲಿ) ಶರದೃತು ಮತ್ತೆ ಬಂದಿದೆ; ಬೆಳದಿಂಗಳು ಗೀತ ನೃತ್ಯ ಎಲ್ಲವೂ ವಿಜೃಂಭಿಸುತ್ತಿವೆ....ಮತ್ತೆ ಮಂದಮಾರುತ ತೀಡಿಬರುತ್ತಿದೆ, ಕಸ್ತುರಿಗಂಪಿನ ಪ್ರಣಯಸಲ್ಲಾಪಗಳನ್ನು ತೇಲಿಸಿಕೊಂಡು....ಇವುಗಳ ಕೂಡ ನೀನೇಕೆ ಬರುವುದಿಲ್ಲ, ತಾನಿ?....ಒಮ್ಮೆ, ಈ ಬೆಳುದಿಂಗಳೇ ಘನವಾಗಿ ನೀನು ಮೂಡಬಾರದೆ? ಒಮ್ಮೆ, ಈ ಅನಂಗಗೀತವೇ ಮೆಯ್‌ಗೊಂಡು ನಿನ್ನ ಮಂಗಲಮೂರ್ತಿಯಾಗಿ ಸುಳಿಯಬಾರದೆ?....ಇಲ್ಲ. ವಿಕಟ ವಿಧಿಗೆ ಅಂತಹ ಮಧುರಸ್ವಭಾವ ಹೇಗೆ ಬಂದೀತು?....ಅಯ್ಯೋ! ಎಷ್ಟು ಹಿಂಸಿಸುತ್ತಿದೆ, ಈ ಚಂದ್ರಕಿರಣ! ತಿವಿದುತಿವಿದು ಕೊಲ್ಲುವ ರಾಗಭರ್ಜಿಗಳ ಜೊತೆಯಲ್ಲಿ ಈ ಸುಡುಬಿಸಿಲು!.... ಅಯ್ಯೋ!!....

[ದೃಶ್ಯಪರಿವರ್ತನ]

* * * *

[ಹೃದಯವಿದ್ರಾವಕವಾದ ಅನೇಕ ರೋಗಿಗಳ ನರಳುವಿಕೆಯ ಹಿನ್ನೆಲೆಯಿರಲು]

ಒಬ್ಬರೋಗಿ :—ಅಯ್ಯೊ !!....ಉರಿ....ಉರಿ....ಶರೀರ ಭಸ್ಮವಾಗಿಹೋಯಿತು....ಅಯ್ಯೋ!....—ಮನೆ ಮಠ ಹೆಂಡತಿ ಮಕ್ಕಳು.... ಎಲ್ಲವೂ ಭ್ರಾಂತಿ!....ನಾನು ಕಟ್ಟಿಸಿದ ಮನೆ, ಸಾಯುವಾಗ ನನಗೇ ಇಲ್ಲವಾಯಿತು !....—ಅಯ್ಯೋ, ಇದೆಂತಹ ಉರಿ !....– ಉರಿ ಹಚ್ಚಿ ಬರಬೇಕಿತ್ತು, ಮನೆಗೆ....ಮನೆಯಲ್ಲ, ಶ್ಮಶಾನಕ್ಕೆ!.... ಅಯ್ಯೋ! ಅಯ್ಯೋ!!

[ಆತನ ನರಳುವಿಕೆ ಹಿಂದೆ ಸರಿಯುತ್ತಿರಲು]

ತರುಣ:—ಅಯ್ಯೋ! ಉರಿ .... ದಾಹ .... ನೀರು!! .... ಅಯ್ಯೋ!.... ಈ ಮಾರಿ ಕೊಂಡೊಯ್ಯುತ್ತದೆ....ಸಂಪತ್ತು....ಯೌವ್ವನ....ಪ್ರೇಮ ....ಹಸಿವು!....ಅಯ್ಯೋ! ವಾಸವದತ್ತೆ! ವಾಸವದತ್ತೆ!!

ವಾಸವ: —ಯಾರು !....ಯಾರು ಕರೆಯುತ್ತಿರುವವರು ?

ತರುಣ:—ಆ್ಞ !....ವಾಸವದತ್ತೆ !!....ನೀನೂ !!....ವಾಸವದತ್ತೆ ! ವಾಸವ ದತ್ತೆ !!

ವಾಸವ:—....ದುಂಡುಗಣ್ಣಿನ ತರುಣ !....

ತರುಣ:—ವಾಸವದತ್ತೆ! ನಿನಗೂ ಈ ಮಾರಿ !!....

ವಾಸವ:—ನಿನಗೂ ಈ ಬೇನೆ !....ಅಯ್ಯೋ....–ಬೇನೆಗೆ ಬಡತನ–ಸಿರಿತನ ಸೌಂದರ್ಯ—ಕುರೂಪಗಳ ಭೇದವಿಲ್ಲ.

ತರುಣ:—ಈ ಭೂಮಿ ನರಕವಾಗುತ್ತಿದೆ, ನರಕವಾಗುತ್ತಿದೆ ವಾಸವದತ್ತೆ! (ಕ್ಷಣ ತಡೆದು) ನನಗೆ ಸಮಾಧಾನ....ನಾನು ನಿನ್ನೆದುರಿನಲ್ಲಿ ಸಾಯುತ್ತಿದ್ದೇನೆ!....ನೀನು ಮಾತ್ರ ಸಾಯಬಾರದು!....ನೀನು ಬದುಕಲೇಬೇಕು, ವಾಸವದತ್ತೆ !....ನಿನ್ನಲ್ಲಿಯೇ ನಾನು ಬದುಕುತ್ತೇನೆ....

ವಾಸವ:—ರಾಜ! ನನ್ನ ರಾಜ !!....

[ದಾರುಣವಾದ ವಾದ್ಯಸೇತು. ಅನಂತರ:]

ತರುಣ :–....ಅಯ್ಯೋ !....ವಾಸವ....ದ....ತ್ತೆ !....

[ಕೊನೆಯ ಅಕ್ಷರಗಳು ನಾಲಗೆಯಲ್ಲಿಯೇ ಕರಗಿ ತರುಣ ಮೃತನಾದುದು ಸೂಚಿತವಾಗುತ್ತದೆ.]

ವಾಸವ:—(ವಿಸ್ಮೃತಳಂತೆ) ಮಗೂ! ಮಗೂ!!....

[ದುಃಖವಾದ್ಯದ ಪರಾಕಾಷ್ಠೆ; ಮೌನ; ಅನಂತರ ಮೊದಲಿನಂತೆಯೇ ರೋಗಿಗಳ ನರಳುವಿಕೆ ಇ.,]

ರೋಗಿ:—...ನೀರು....ಸ್ವಲ್ಪ ನೀರು!!

ಉಪಗುಪ್ತ:—ಬಾಯಿತೆರೆ, ತಮ್ಮಾ, ನೀರು ಕುಡಿಸುತ್ತೇನೆ.

ರೋಗಿ:—ಓ!....ಯಾರು!?....ಧರ್ಮಭಿಕ್ಷು ಉಪಗುಪ್ತರು!....ಅಯ್ಯೋ.... ಈ ನರಕದಲ್ಲಿ ತಾವೇಕೆ ಬಂದಿರಿ, ಭಗವನ್?

ಉಪಗುಪ್ತ:—ಆಯಾಸವಾಗುತ್ತದೆ, ತಮ್ಮ. ಮಾತನಾಡಬಾರದು. ಎಲ್ಲಿ, ಬಾಯಿತೆರೆ.... (ನೀರು ಕುಡಿಸಿದ ಸದ್ದು) ನೀರಿನ ಸಂಗಡ ಔಷಧ ಬೆರೆಸಿದ್ದೇನೆ. ಯೋಚಿಸಬೇಡ. ರೋಗ ಗುಣವಾಗುತ್ತದೆ.

ರೋಗಿ:—ಭಗವನ್! ಭಗವನ್!!

[ಹೆಜ್ಜೆ ಚಲಿಸುವ ಸದ್ದು.]

ಉಪಗುಪ್ತ:—ತಾಯಿ, ಔಷಧ....

ವಾಸವ:—ಯಾರು?—ನೀವು!!!

ಉಪಗುಪ್ತ:—ಹೌದು, ವಾಸವದತ್ತೆ. ಬಾಯಿತೆರೆ. ಔಷಧಕುಡಿಸುತ್ತೇನೆ.

ವಾಸವ:—ನೀವೇ ಉಪಗುಪ್ತರು!!

ಉಪಗುಪ್ತ:—(ಮೌನ)

ವಾಸವ:—ಅಶೋಕ ಚಕ್ರವರ್ತಿಗಳ ಧರ್ಮಗುರು!

ಉಪಗುಪ್ತ:—....ತಾಯಿ, ಈ ಔಷಧವನ್ನು ಕುಡಿದು ವಿಶ್ರಾಂತಳಾಗಬೇಕು, ನೀನು.

ವಾಸವ:—ಭಗವನ್! ಕ್ಷಮಿಸಿ, ಭಗವನ್!....ಅಂದು, ಅಮಾವಾಸ್ಯೆಯ ರಾತ್ರಿಯಲ್ಲಿ....

ಉಪಗುಪ್ತ:—ಮಾತನಾಡಬಾರದು ತಾಯಿ, ಬಳಲಿಕೆಯಾಗುತ್ತದೆ.

ವಾಸವ:—ನೀವೇ ನನ್ನನ್ನು ಹುಡುಕಿ ಬಂದಿರಿ, ಭಗವನ್....ಇಂದು ಪೂರ್ಣಿಮೆಯ ರಾತ್ರಿ!....

ಉಪಗುಪ್ತ :—ಬಾಯಿ ತೆರೆ, ತಾಯಿ....(ಔಷಧ ಕುಡಿಸಿದ ಸದ್ದು) ನಿಶ್ಚಿಂತೆಯಿಂದ ವಿಶ್ರಾಂತಳಾಗು, ತಾಯಿ. ಏನಾದರೂ ಬೇಕಿದ್ದರೆ ಕರೆ. ರಾತ್ರಿ ಇಲ್ಲಿಯೇ ಇರುತ್ತೇನೆ. [ಹೆಜ್ಜೆ ಚಲಿಸುವ ಸದ್ದು.]

ವಾಸವ :—(ತನ್ನಲ್ಲೆ) ನೀವು ಈ ಲೋಕದವರಲ್ಲ, ಭಗವನ್ !

[ನರಳುವಿಕೆಯ ಹಿನ್ನೆಲೆಯಲ್ಲಿ ತುಸು ದೂರದಿಂದ ಗಂಭೀರವಾಣಿ:]

ಉಪಗುಪ್ತ :—ಬುದ್ಧಂ ಶರಣಂ ಗಚ್ಛಾಮಿ ! ಸಂಘಂ ಶರಣಂ ಗಚ್ಛಾಮಿ ! [ರೋಗಿಗಳ ಮನಸ್ಸು ನೋವು ಮರೆತು ಇತ್ತ ತಿರುಗಿದಂತೆ ನರಳುವಿಕೆ ಕ್ಷಯಿಸುತ್ತಿರಲು] ಧರ್ಮಂ ಶರಣಂ ಗಚ್ಛಾಮಿ !....



# ಕ್ಷಾಂತಿವಾದಿ

---

ಪಾತ್ರಗಳು : ಬೋಧಿಸತ್ತ್ವ,
ಕಲ್ಯಾಣ,
ಕಲಾಬು ಮಹಾರಾಜ,
ಮತ್ತು ಶ್ರೀಮಂತ, ನರ್ತಕಿಯರು, ಚೇಟಿ, ಚಂಡಾಲರು ಇ.,

ಕಲ್ಯಾಣ :—....ಸುಮಾರು ಆರುಎಂಟು ವರ್ಷಗಳ ಈಚೆಗೆ, ಕಲಾಬು ಮಹಾರಾಜರು ಸಿಂಹಾಸನವನ್ನೇರಿದ ಮೇಲೆ, ಈ ವಾರಣಾಸೀ ರಾಜ್ಯಕ್ಕೆ ಇಂತಹ ದುರ್ದೆಶೆ ಪ್ರಾಪ್ತವಾಯಿತು, ಭನ್ತೇ. ನಮ್ಮ ಪ್ರಭುಗಳ ವಿಲಾಸಜೀವನ ಈ ಸಂಸ್ಥಾನದ ಪ್ರಜರ ಸುಖವನ್ನೆ ಆಹುತಿ ತೆಗೆದುಕೊಂಡಿತು. ಅಧಿಕಾರದಲ್ಲಿರುವ ನಾವು ಕೂಡ ಅಸಹಾಯಕರಾಗಿ ಕುಳಿತುಬಿಟ್ಟದ್ದೇವೆ. ಹೆಸರಿಗೆ ನಾನು ಸೇನಾಧಿ ಪತಿ; ಆದರೆ ಪ್ರತಿಯೊಂದು ಕ್ಷುಲ್ಲಕ ವಿಷಯಕ್ಕೆ ಕೂಡ ನಾನು ಪ್ರಭುಗಳ ಆಜ್ಞೆಯನ್ನೇ ಅವಲಂಬಿಸಬೇಕು.

ಬೋಧಿಸತ್ತ್ವ :—ವಾರಣಾಸಿಯಲ್ಲಿ ಧರ್ಮಲುಪ್ತವಾಗಿದೆ, ಭಿಕ್ಷುಗಳಿಗೆ ಸ್ಥಳ ವಿಲ್ಲ ಎಂದು ನಮ್ಮ ಸಂಘದಲ್ಲಿ ವದಂತಿಯಾಗಿತ್ತು, ಆರ್ಯ. ಆದರೆ ನಿಜವಾದ ಭಿಕ್ಷು ಅಂತಹ ಮಾತುಗಳನ್ನು ನಂಬುವುದಿಲ್ಲ. ಜಗತ್ತಿನಲ್ಲಿ ಪ್ರಾಣ ಸಂಚಾರವಾಗುತ್ತಿರುವ ಪರ್ಯಂತ, ಆ ಪ್ರಾಣದ ಪ್ರಾಣವಾದ ಧರ್ಮ ಹೇಗೆ ಲುಪ್ತವಾದೀತು? ಅದನ್ನು ನಿದರ್ಶಿಸುವ ಸಲುವಾಗಿ ನಾನು ಮಾರ್ಗವನ್ನು ಬದಲಿಸಿ ಇಲ್ಲಿಗೆ ಬಂದಿದ್ದೇನೆ.

ಕಲ್ಯಾಣ :—ದೇಶದ ಅತ್ಯಗತ್ಯ ವೇಳೆಯಲ್ಲಿ ತಾವು ದಯೆಮಾಡಿಸಿದಿರಿ, ಭಗವನ್. ನಾಡಿನ ಯಾವುದೋ ಸುಕೃತ ತಮ್ಮನ್ನು ಇಲ್ಲಿಗೆ ಕರೆತಂದಿತು....ನನ್ನ ಪ್ರಾರ್ಥನೆಯನ್ನು ಮನ್ನಿಸಿ ತಾವು ಈ ನಗರ ದಲ್ಲಿ ನಾಲ್ಕು ದಿನವಾದರೂ ಉಳಿದು ಕೃಪೆ ಮಾಡಬೇಕು. ಇಲ್ಲಿನ

ಜನ ತಮ್ಮ ಅಮೃತವಾಣಿಯನ್ನು ಕೇಳಿ ಧರ್ಮದಲ್ಲಿ ಆಸಕ್ತಿ ಹೊಂದಲಿ, ಅದರಿಂದ ದೇಶದ ಮಂಗಲವಾಗಲಿ–ಎಂಬ ಇಚ್ಛೆಯಿಂದ ಬೇಡುತ್ತಿದ್ದೇನೆ, ಭಗವನ್.

ಬೋಧಿ:–ನಿನ್ನ ಇಚ್ಛೆಗೆ ಬದಲು ಹೇಳುವುದಿಲ್ಲ, ಕಲ್ಯಾಣ. ಭಿಕ್ಷವೃತ್ತಿಯನ್ನು ಕೈಗೊಂಡವನು ಯಾರ ಆಹ್ವಾನವನ್ನೂ ತಿರಸ್ಕರಿಸುವುದಿಲ್ಲ.

ಕಲ್ಯಾಣ:—ತಮ್ಮ ಅಪಾರವಾದ ಕೃಪೆ, ಭಗವನ್!....ತಾವು ಈ ದೀನ ಕುಟೀರದಲ್ಲೆ ಉಳಿದುಕೊಂಡರೆ ವಿಶೇಷವಾದ ಅನುಗ್ರಹವೆಂದು ಭಾವಿಸುತ್ತೇನೆ.

ಬೋಧಿ:—ಯಾರೊಬ್ಬರ ಮನೆಯಲ್ಲಿ ಉಳಿಯಬಾರದೆಂಬುದು ಭಿಕ್ಷುಧರ್ಮ. ನಾನು ಈ ನಗರದ ಹೊರಭಾಗದಲ್ಲಿ ಎಲ್ಲಿಯಾದರೂ ಉಳಿದುಕೊಳ್ಳುತ್ತೇನೆ. ಭಿಕ್ಷೆಗಾಗಿ ನಗರದ ಸುತ್ತಲೂ ಸಂಚಾರ ಮಾಡುತ್ತೇನೆ. ನಿನಗೆ ಅಗತ್ಯವೊದಗಿದಾಗ ನಾನು ಇಲ್ಲಿಗೇ ಬರುತ್ತೇನೆ.

ಕಲ್ಯಾಣ:—ತಮ್ಮ ಇಚ್ಛೆಯಂತೆಯೇ ಆಗಲಿ, ಭಗವನ್. ಈ ನಗರದ ಬಹಿರ್ವಲಯದಲ್ಲಿ ಪ್ರಶಾಂತವಾದ ಮಾಕಂದೋದ್ಯಾನವಿದೆ. ಅಲ್ಲಿಯೇ ತಾವು ಉಳಿದುಕೊಳ್ಳಬಹುದು.

ಬೋಧಿ:—ಒಳ್ಳೆಯದು, ಕಲ್ಯಾಣ. ನಾನಿನ್ನು ಹೊರಡುತ್ತೇನೆ....ಅಗತ್ಯವಿದ್ದರೆ ಯಾವ ಉಪಾಸಕನೇ ಆಗಲಿ ನನ್ನನ್ನು ಕರೆಯಬಹುದು. ನಾನು ಅಲ್ಲಿ ಹೋಗುತ್ತೇನೆ.

ಕಲ್ಯಾಣ:—ಇಂದಿನ ಭಿಕ್ಷವನ್ನಾದರೂ ಕೊಂಡು ಅನುಗ್ರಹಿಸಬಾರದೆ, ಭಗವನ್?

ಬೋಧಿ:—ಪ್ರೇಮಾರ್ದ್ರಹೃದಯದ ಮಧುಕುಂಭವನ್ನೆ ಅರ್ಪಿಸಿದ್ದೀಯೆ, ಕಲ್ಯಾಣ. ಇದಕ್ಕಿಂತ ಹೆಚ್ಚೇನು ಬೇಕು?....ನಾನಿನ್ನು ಹೊರಡುತ್ತೇನೆ. ನಿನಗೆ ಮಂಗಳವಾಗಲಿ.

ಕಲ್ಯಾಣ:—ತಮ್ಮ ಕರುಣೆ, ಭನ್ತೇ!

[ಹೆಜ್ಜೆ ಕ್ಷಯಿಸುವುದು; ಒಂದು ಕ್ಷಣ ಮೌನ; ಅನಂತರ ಒಂದು ಹೆಜ್ಜೆ ವೃದ್ಧಿಸುವುದು.]

ಕಲ್ಯಾಣ :—ಬನ್ನಿ ಶ್ರೀಮಂತರೆ. ತುಂಬ ಅಪೂರ್ವವಾದ ಆಗಮನ!.... ಹೀಗೆ ಬನ್ನಿ.

ಶ್ರೀಮಂತ :—ಇಲ್ಲಿಗೊಬ್ಬ ಮಹಾತ್ಮರು ಬಂದಿರುವರೆಂದು ಕೇಳಿದೆ. ಅವರನ್ನು ದರ್ಶನಮಾಡಿ ಹೋಗಬಹುದೆಂದು ತೋರಿತು. ಅಲ್ಲದೆ, ಯಾವುದಾದರೊಂದು ವ್ಯಾಜದಿಂದ ತಮ್ಮನ್ನು ಆಗಾಗ ಕಾಣದಿದ್ದರೆ ನನಗೆ ಸಮಾಧಾನವೇ ಇರುವುದಿಲ್ಲ.

ಕಲ್ಯಾಣ :—ಒಳ್ಳೆಯದು, ಶ್ರೀಮಂತರೆ....ಆದರೆ ಪೂಜ್ಯರು ಈಗ ಮಾತ್ರ ಇಲ್ಲಿಂದ ಬಿಜಯಮಾಡಿಸಿದರು.

ಶ್ರೀಮಂತ :—ಹಾಗೇನು?—ನಾನು ಸ್ವಲ್ಪ ಮೊದಲೇ ಬಂದಿದ್ದರೆ ಒಳ್ಳೆಯದಿತ್ತು. ಕೆಲವು ದಿನ ಅವರು ಇಲ್ಲಿಯೇ ಇರುವರೆಂದು ನಾನು ಭಾವಿಸಿದೆ.

ಕಲ್ಯಾಣ :—ಯಾರೊಬ್ಬರ ಮನೆಯಲ್ಲಿ ಉಳಿಯಬಾರದೆಂಬುದು ಅವರ ನಿಯಮ. ಆದರೂ ಅವರು ಈ ನಗರದಲ್ಲೆ ಕೆಲವುದಿನ ಇರುತ್ತಾರೆ. ಅವರ ಧ್ಯಾನಕ್ಕೆ ಭಂಗವಾಗದಿರಲೆಂದು ನಾನು ರಾಜವಿಲಾಸದ ಮಾಕಂದವನದಲ್ಲಿ ಇಳಿದುಕೊಳ್ಳಬಹುದೆಂದು ಸೂಚಿಸಿದೆ. ಅವರು ಅಲ್ಲಿಯೇ ಇರುತ್ತಾರೆ. ಯಾವ ಕಾಲದಲ್ಲಾದರೂ ನಾವು ಹೋಗಿ ದರ್ಶನ ಪಡೆದು ಬರಬಹುದು.

ಶ್ರೀಮಂತ :—ಸರಿ. ಹಾಗಿದ್ದರೆ ನಾಳೆಯೇ ಹೋಗಿ ಬರಬಹುದು....ಈ ಅಧರ್ಮರಾಜ್ಯಕ್ಕೆ ಇಂತಹ ಮಹಾತ್ಮರು ದಯೆಮಾಡಿಸಿರುವುದೇ ಒಂದು ಸುಕೃತ. ಅಲ್ಲದೆ, ಅವರು ಪೂರ್ವಾಶ್ರಮದಲ್ಲಿ ಒಬ್ಬ ಶಿಲ್ಪಿಪುತ್ರರಾಗಿದ್ದರಂತೆ--ನಿಜವೆ, ಸೇನಾಧಿಪತಿ?

ಕಲ್ಯಾಣ :--ಹೌದು. ಪೂರ್ವಾಶ್ರಮದಲ್ಲಿ ಇವರು ಕಂಡ ಕುಮಾರನೆಂಬ ಹೆಸರಿನಲ್ಲಿ ಪ್ರಖ್ಯಾತ ಶಿಲ್ಪಿಯೊಬ್ಬನ ಏಕಮಾತ್ರ ಪುತ್ರರಾಗಿ ಜನ್ಮತಾಳಿದರು. ಇವರ ವಿದ್ಯಾಭ್ಯಾಸ ತಕ್ಷಶಿಲೆಯಲ್ಲಿ ನಡೆಯಿತು. ವ್ಯಾಸಂಗ ಮುಗಿದು ಮನೆಗೆ ಬಂದಾಗ ವೃದ್ಧ

ರಾದ ತಂದೆತಾಯಿಗಳಿಬ್ಬರೂ ಮೃತರಾದರು. ಅಪಾರವಾದ ಐಶ್ವರ್ಯವನ್ನೂ ಕೀರ್ತಿಯನ್ನೂ ಗಳಿಸಿ ತನ್ನ ತಂದೆ ಮರಣಕ್ಕೆ ತುತ್ತಾದುದನ್ನು ಕಂಡಾಗ ಇವರಲ್ಲಿ ವೈರಾಗ್ಯಹುಟ್ಟಿತು....

ಶ್ರೀಮಂತ:—ದಿವ್ಯಚೇತನಗಳಿಗೆ ವೈರಾಗ್ಯಪಡೆಯಲು ಎಷ್ಟು ಅಲ್ಪಕಾರಣ ಸಾಕು!

ಕಲ್ಯಾಣ:—....ಅನಂತರ ಮನೆಯಲ್ಲಿದ್ದ ಅಪಾರಸಂಪತ್ತನ್ನು ದಾನಮಾಡಿ ಇವರು ಹಿಮವತ್ಪ್ರಾಂತ್ಯಕ್ಕೆ ತೆರಳಿದರು. ಅಲ್ಲಿ ಪರಿವ್ರಾಜಕರಾಗಿ ಅನಂತರ ದೇಶಸಂಚಾರ ಹೊರಟಿದ್ದಾರೆ.

ಶ್ರೀಮಂತ:—ಅವರು ಮಾಕಂದವನದಲ್ಲಿ ಉಳಿದಿದ್ದಾರಲ್ಲವೆ, ಸೇನಾಧಿಪತಿ?

ಕಲ್ಯಾಣ:—ಹೌದು.

ಶ್ರೀಮಂತ:—ಈ ಪೂರ್ಣಿಮೆಯ ದಿನದಂದು ಅಲ್ಲಿ ನಮ್ಮ ಪ್ರಭುಗಳ ನೃತ್ಯಕೂಟವಿರುವುದೆಂದು ಆಹ್ವಾನಬಂದಿದೆ.

ಕಲ್ಯಾಣ:—ಅದರಿಂದ ಯಾವ ತೊಂದರೆಯೂ ಇಲ್ಲ, ಶ್ರೀಮಂತರೆ. ನೃತ್ಯಕೂಟ ನಡೆಯುವುದು ಮಾಕಂದೋದ್ಯಾನದ ಉತ್ತರಮುಖದಲ್ಲಿರುವ ನರ್ತನಶಾಲೆಯಲ್ಲಿ.

ಶ್ರೀಮಂತ:—ನಮ್ಮ ಪ್ರಭುಗಳ ಲಹರಿ ವಿಲಕ್ಷಣವಾದುದು. ಅದರಿಂದ ಅ ಮಹಾತ್ಮರಿಗೆ ಅನವಶ್ಯಕ ತೊಂದರೆಯಾಗದಿರಲಿ ಎಂದು ಹೇಳುತ್ತಿದ್ದೇನೆ.

ಕಲ್ಯಾಣ:—ಅದಕ್ಕೆ ತಕ್ಕ ವ್ಯವಸ್ಥೆ ಮಾಡುತ್ತೇನೆ.

ಶ್ರೀಮಂತ:—ಒಳ್ಳೆಯದು. ನಾನಿನ್ನು ಬರುತ್ತೇನೆ. ನಾಳೆ ಹೋಗಿ ಅವರ ದರ್ಶನ ಪಡೆಯೋಣ.

ಕಲ್ಯಾಣ:—ಒಳ್ಳೆಯದು, ಶ್ರೀಮಂತರೆ.

[ಹೆಜ್ಜೆ ಕ್ಷಯಿಸುವುದು. ಗೀತಸೇತುವಿನ ಸ್ವರಸೋಪಾನದ ಮೂಲಕವಾಗಿ ದೃಶ್ಯ ಹಾಗೂ ಕಾಲಪರಿವರ್ತನೆ ಸೂಚಿತವಾಗುವುದು.]

* * * *

ಕಲ್ಯಾಣ:—....ರಾಜಧಾನಿಯ ಶ್ರೀಮಂತ ನಾಗರಿಕರಾದ ನೀವು ಈ ದಿನದ ನೃತ್ಯಕೂಟಕ್ಕೆ ಆಗಮಿಸಿರುವುದು ನಮ್ಮ ಪ್ರಭುಗಳಿಗೆ

ಹರ್ಷವನ್ನುಂಟುಮಾಡಿದೆ. ಪ್ರಭುಗಳ ಪರವಾಗಿ ಇದನ್ನು ಸೂಚಿಸಲು ನನಗೆ ಸಂತೋಷವಾಗುತ್ತದೆ.

ಶ್ರೀಮಂತ :—ನಮ್ಮ ಬಗೆಗೆ ತೋರಿಸಿದ ಕೃಪೆಗಾಗಿ ಪ್ರಭುಗಳಿಗೆ ನಾವೆಲ್ಲರೂ ಭಕ್ತಿಯಿಂದ ನಮಿಸುತ್ತಿದ್ದೇವೆ. ಇನ್ನು ನಮಗೆ ಅನುಜ್ಞೆಯನ್ನು ಕೊಡಬೇಕು.

ಕಲಾಬು :—ಒಳ್ಳೆಯದು, ನೀವೆಲ್ಲರೂ ಹೊರಡಬಹುದು.

[ಹೆಜ್ಜೆಗಳು ಕ್ಷಯಿಸುವುವು]

ಕಲ್ಯಾಣ :—ನಾನೂ ತಮ್ಮ ಅಪ್ಪಣೆಗಾಗಿ ಕಾದಿದ್ದೇನೆ, ಪ್ರಭು.

ಕಲಾಬು :—ಒಳ್ಳೆಯದು. ಹೋಗು.

[ಹೆಜ್ಜೆ ಕ್ಷಯಿಸುವುದು.]

ಕಲಾಬು :—....ನಿಲ್ಲಿಸಿದಿರೇಕೆ? ನಾಟ್ಯಗೀತಗಳು ಮುಂದುವರಿಯಲಿ.... ಪದ್ಮಾವತಿ, ನೀನು ನರ್ತನವನ್ನು ನಿಲ್ಲಿಸಬಹುದು. ನಿನ್ನಂತಹ ಸುಂದರಿ ಕುಳಿತರೆ ನಿಂತರೆ ಅದೇ ಒಂದು ಅಮೋಘ ನರ್ತನವಾಗುತ್ತದೆ!....ನಿನ್ನ ಸ್ಥಾನವು ಇಲ್ಲಿ; ನನ್ನ ಪಕ್ಕದಲ್ಲಿ....ಬಾ.

ಪದ್ಮಾವತಿ :—ಧನ್ಯಳಾಗಿದ್ದೇನೆ, ಪ್ರಭು.

[ವಿಲಾಸದ ನಡೆಯನ್ನು ಸೂಚಿಸುವ ಗೆಜ್ಜೆಗಳ ಸದ್ದು.]

ಕಲಾಬು :—ಆಹ್! ಇದಕ್ಕೆ ಮಿಗಿಲಾದ ನರ್ತನವುಂಟೆ? ಜಿಂಕೆಯಂತೆ ನೀನು ಹಾರಿ ಬರುವಾಗ ನನ್ನ ಹೃದಯ ಹೇಗೆ ಕಂಪಿಸುತ್ತದೆ, ಬಲ್ಲೆಯಾ?

ಪದ್ಮಾವತಿ :—ಅಬ್ಬ! ಪ್ರಭುಗಳು ಕವಿಯೂ ಆಗಿದ್ದಾರೆ! (ನಗು)

ಕಲಾಬು :—ಹ್ಞಾ, ಹಾಗೆಯೇ ಸದಾ ನಗುತ್ತಿರಬೇಕು ನೀನು!....ಚೇಟಿ, ಮದ್ಯವನ್ನು ತೆಗೆದುಕೊಂಡು ಬಾ.

[ಹೆಜ್ಜೆಯ ಸದ್ದು]

ಪದ್ಮಾವತಿ :—ಊಹ್ಞೂ, ಹಾಗಲ್ಲ. ಇಲ್ಲಿ ಕೊಡು. ಅದು ನನ್ನ ಮೂಲಕವಾಗಿಯೇ ಮಹಾಪ್ರಭುಗಳಿಂದ ಸ್ವೀಕೃತವಾಗಬೇಕು.

ಕಲಾಬು :—ಹ್ಞು, ಇಂತಹ ಕುಶಲೆಯೆಂದೇ ನಿನ್ನನ್ನು ಇಲ್ಲಿ ಕೂರಿಸಿದ್ದೇನೆ! ....ಭಲಾ! ಇನ್ನಿಷ್ಟು ತುಂಬಿಕೊಡು....

[ಹಿಂದೆ ಅಸ್ಪಷ್ಟವಾಗಿ ನರ್ತಕಿಯರ ಪಿಸುಮಾತು ಕೇಳಿಸುತ್ತಿರುತ್ತದೆ.]

ಕಲಾಬು :—ಆ ನರ್ತಕಿಯರೇಕೆ ಸುಮ್ಮನೆ ನಿಂತಿದ್ದಾರೆ?

ಪದ್ಮಾ:—ಕೇಳಿಸಲಿಲ್ಲವೆ, ಪ್ರಭುಗಳ ಆಜ್ಞೆ?

[ನಾಟ್ಯಗೀತಗಳು ಆರಂಭವಾಗಿ ತುಸುಹೊತ್ತು ವಿಜೃಂಭಿಸಿ ಹಿನ್ನೆಲೆಗೆ ಸರಿಯುತ್ತಿರಲು]

ಕಲಾಬು :—(ತೊದಲುತ್ತ) ಪದ್ಮಾವತಿ....ನಾನು ವಿಶ್ರಾಂತನಾಗಬೇಕು.... ಹ್ಞಾ! ಹಾಗೆ!....ಇನ್ನೂ ಹತ್ತಿರ ಬಾ! ಇ....ನ್ನೂ....ಹತ್ತಿರ!....

ಪದ್ಮಾ:—ಹ್ಞು....ತಲೆಯಿಟ್ಟುಕೊಳ್ಳಿ, ಮಹಾರಾಜ....ಮದ್ಯ ಕೊಡಲೇನು?

ಕಲಾಬು :—ಹ್ಞು....ಬೇಕು! ಇನ್ನೂ ಬೇಕು....ಇನ್ನೂ........(ಮಧ್ಯ ಕುಡಿಯುತ್ತಿರುವ ಸದ್ದು)....ಯಾರು? ದೇವೇಂದ್ರ!!....ಆಮೇಲೆ ಬರಲಿ!....ಅನಂತರ!!....ನ....ನ....ಗೆ....ನಿದ್ದೆ!....

[ಹಿನ್ನೆಲೆಗೆ ಸರಿದ ವಾದ್ಯಗೀತಗಳು ಮತ್ತೆ ಹತ್ತಿರವಾಗುತ್ತವೆ.]

ಪದ್ಮಾ:—ಸಾಕು, ನಿಲ್ಲಿಸಿ.

[ವಾದ್ಯಗೀತಗಳು ಹಠತ್ತಾಗಿ ನಿಲ್ಲುವುವು.]

ಮಂಜರಿ :—ಪದ್ಮಾವತಿ, ಪ್ರಭುಗಳು ನಿದ್ದೆ ಹೋಗಿದ್ದಾರೇನು?

ಪದ್ಮಾ :—ಹೌದು. ನಿಮ್ಮ ಕರ್ಕಶ ನರ್ತನವನ್ನು ನಿಲ್ಲಿಸಬಹುದು. ಪ್ರಭುಗಳು ಎಚ್ಚೆತ್ತುಬಿಟ್ಟಾರು!

ಸುಕನ್ಯೆ:—(ವ್ಯಂಗ್ಯವಾಗಿ) ಆಗಲಿ. ರಾಣಿಯವರ ಅಪ್ಪಣೆ!

ಶಾಂತಲಾ:—(ಸಣ್ಣದಾಗಿ) ನಾವೇಕೆ ಇಲ್ಲಿ ಸುಮ್ಮನೆ ನಿಂತಿರಬೇಕು? ಉದ್ಯಾನವನಕ್ಕಾದರೂ ಹೋಗೋಣ.

ಮಂಜರಿ :—ನಡೆಯಿರಿ. ಇಲ್ಲಿ ಮಾಡುವುದಾದರೂ ಏನು?

[ನಡೆಯುತ್ತ ಹೋಗುವ ಪೈಜಣದ ಸದ್ದುಗಳನ್ನು ಧ್ವನಿವರ್ಧಕ ಹಿಂಬಾಲಿಸುತ್ತದೆ]

ಸುಕನ್ಯೆ:—ಹ್ಞು! ಎಷ್ಟು ಗರ್ವ ಈ ಹೆಣ್ಣಿಗೆ—ನೋಡಿದೆಯಾ, ಮಂಜರಿ?

ಮಂಜರಿ :—ರಾಜನ ಕಣ್ಣಿಗೆ ಬಿದ್ದೆನೆಂದು ಸೊಕ್ಕು!

ಶಾಂತಲಾ:—ನಮ್ಮ ಕೂಡ ಹೇಗೆ ಮಾತನಾಡುತ್ತಾಳೆ ಕಂಡೆಯಾ, ಸುಕನ್ಯೆ?—ತುಚ್ಛ ಹೆಣ್ಣು!

ಸುಕನ್ಯೆ:—ರೂಪಿಗೆ ತಕ್ಕ ಸ್ವಭಾವ.

ಮಂಜರಿ:—ಆಹಹಹ! ಅವಳ ರೂಪೋ! ದೇವರಿಗೇ ಪ್ರೀತಿ....ಮಹಾರಾಜ 'ಸುಂದರಿ' ಎಂದು ಬಿಟ್ಟ; ಈಕೆ ತಾನೇ ಊರ್ವಶಿ ಎಂದು ತಿಳಿದುಬಿಟ್ಟಳು.

ಶಾಂತಲಾ:—ಆ ಕುಡುಕ ರಾಜನಿಗೆ ಸರಿಯಾಗಿದೆ ಈ ಆನೆ! ಒಳ್ಳೆಯ ಜೋಡಿ!

[ತಾಳ ಹಾಕುವ ಪೈಜಣದ ಕೂಡ ನಗು ಅಲೆಯಲೆಯಾಗಿ ಹೊಳಲಿಡುತ್ತದೆ. ಒಮ್ಮೆ ಹಠಾತ್ತಾಗಿ ಪೈಜಣದ ಸದ್ದು ನಿಲ್ಲುತ್ತದೆ.]

ಮಂಜರಿ:—ಸುಕನ್ಯಾ! ಶಾಂತಲಾ! ಅಲ್ಲಿನೋಡಿ!....ಆ ಮಾಕಂದದ ಕೆಳಗೆ!

ಸುಕನ್ಯೆ:— ಓಹ್!....ಎಂತಹ ರೂಪೇ ಅದು!....ಅವನೇನು ಈ ಲೋಕದ ಪುರುಷನೋ ಅಥವಾ ಗಂಧರ್ವನಗರಿಯಿಂದ ಇಳಿದು ಬಂದ ವನೋ....

ಶಾಂತಲಾ:—ಅಬ್ಬ! ಹೇಗೆ ಕುಳಿತಿದ್ದಾನೆ, ನೋಡು. ಎದೆ ಎತ್ತರದ ಅಗ್ನಿಜ್ವಾಲೆ ನಿಶ್ಚಲವಾಗಿ ಉರಿಯುತ್ತಿರುವಂತೆ!

ಮಂಜರಿ:—ಶಾಂತಲಾ, ಇದೇನು ಕನಸು ಕಾಣುತ್ತಿರುವೆವೋ....

ಸುಕನ್ಯೆ:—ಹೀಗೇಕೆ ಕಂಪಿಸುತ್ತಿರುವೆಯೆ, ಶಾಂತಲಾ?....ನೋಡು, ನಿನ್ನ ವಲ್ಕಲ ಜಾರುತ್ತಿದೆ. (ಮೃದುವಾಗಿ ನಗುವಳು)

ಶಾಂತಲಾ:—ನಿಮಗೆ ಹಾಸ್ಯ!....ಸ್ವಲ್ಪ ಕಣ್ಣು ತೆರೆದು ನೋಡಿ. ಅವನು ಯಾವನೋ ಭಿಕ್ಷುವಿರಬೇಕು. ಅವನ ವಸ್ತ್ರವನ್ನು ನೋಡಿ.

ಸುಕನ್ಯೆ:—ಅದನ್ನು ತಿಳಿದೂ ನಿನ್ನ ಸ್ಥಿತಿ ಹೀಗಾಗಿದೆ!

ಶಾಂತಲಾ:—ಸುಕನ್ಯಾ, ಅವರು ಮಹಾನುಭಾವರು. ಹಾಗೆ ಹಾಸ್ಯ ಮಾಡ ಬಾರದು.

ಮಂಜರಿ:—ನಡೆಯಿರಿ. ಅವರ ಬಳಿಗೆ ಹೋಗಿ ನಮಸ್ಕರಿಸಿ ಬರೋಣ. ಎಷ್ಟಾದರೂ ಪೂಜ್ಯರು.

[ಪೈಜಣದ ಹೆಜ್ಜೆಗಳು ಮುಂದುವರಿದು ನಿಲ್ಲುತ್ತವೆ.]

ಶಾಂತಲಾ:—ಭನ್ತೇ, ಇದೊ ವಂದಿಸುತ್ತಿದ್ದೇವೆ. ನಮ್ಮನ್ನು ಆಶೀರ್ವದಿಸ ಬೇಕು.

ಬೋಧಿಸತ್ತ್ವ:—ಏಳಿ, ಸಹೋದರಿಯರಿ. ನಿಮಗೆ ಮಂಗಳವಾಗಲಿ. ನಿಮ್ಮ ಸಲುವಾಗಿ ನನ್ನಿಂದ ಯಾವ ಸಹಾಯ ದೊರೆತೀತು?

ಸುಕನ್ಯೆ:— ನಮಗೆ ಧರ್ಮಬೋಧೆ ಮಾಡಬೇಕು, ಭಗವನ್.

ಬೋಧಿ :—ಧರ್ಮಶ್ರವಣಕ್ಕೆ ಅಷ್ಟೊಂದು ಕಾತರರಾಗಿರುವಿರಾ, ತಾಯಿ?

ಶಾಂತಲಾ :—ಹೌದು, ಭಗವನ್. ನಮ್ಮನ್ನು ನೋಡಿದರೆ ವಿಲಾಸಪ್ರಿಯರೆಂದೂ ಧರ್ಮಾಸಕ್ತರಲ್ಲವೆಂದೂ ತೋರಬಹುದು. ಹಾಗೆ ತಿಳಿಯಬಾರದು, ಭಗವನ್. ನಾವೂ ಜೀವನದಲ್ಲಿ ಅನೇಕ ಕಷ್ಟಗಳನ್ನು ಅನುಭವಿಸಿದ್ದೇವೆ. ಧರ್ಮಕ್ಕೆ ಶರಣಾಗದೆ ಮಾರ್ಗವಿಲ್ಲವೆಂದು ಅರಿತಿದ್ದೇವೆ....

ಸುಕನ್ಯೆ :—ನಮ್ಮ ವಿಲಾಸದಲ್ಲಿ ಕಾಣಲಾಗದ ಒಂದು ಪರಮಶಾಂತಿಯನ್ನು ಇಲ್ಲಿ ಕಂಡಿದ್ದೇವೆ, ಭನ್ತೇ. ಅಂತಹ ಶಾಂತಿಯನ್ನು ಪಡೆಯುವ ಸಲುವಾಗಿ ನಮ್ಮ ಜೀವ ತುಡುಕುತ್ತಿದೆ.

ಮಂಜರಿ :—ನಮ್ಮ ಮಾತುಗಳು ಕಪಟವೆಂದು ಭಾವಿಸಬಾರದು, ಭಗವನ್. ತಮ್ಮ ಪಾದದಿಂದ ನಮ್ಮ ಉದ್ಧಾರವಾಗಬೇಕು.

ಬೋಧಿ :—ತಾಯಂದಿರೆ, ಜಗತ್ತಿನಲ್ಲಿ ಧರ್ಮಶ್ರದ್ಧೆಯಿಲ್ಲದ ಚೇತನವೇ ಇಲ್ಲ. ಹಸುಮಕ್ಕಳಂತಹ ನಿಮ್ಮನ್ನು ನಾನು ಕಪಟಿಗಳೆಂದು ಭಾವಿಸುವುದಿಲ್ಲ. ಎಲ್ಲರೂ ಕುಳಿತುಕೊಳ್ಳಿ. ಧರ್ಮವನ್ನು ಸತ್ಯವನ್ನು ನಾನಾದರೂ ಸಂಪೂರ್ಣವಾಗಿ ಕಂಡವನಲ್ಲ. ನಾನು ತಿಳಿದುದನ್ನು, ಹಿರಿಯರು ಹೇಳಿದುದನ್ನು ನಿಮಗೂ ಹೇಳುತ್ತೇನೆ.

ಎಲ್ಲರೂ :—ನಾವು ಧನ್ಯರು, ಭಗವನ್.

ಬೋಧಿ :— ಮಾನವನ ಗುಣರೂಪಸಂಪತ್ತುಗಳನ್ನೂ ಮೀರಿನಿಂತಿದ್ದು ಶೀಲ —ಹೀಗೆಂದು ನಾನು ತಿಳಿದಿದ್ದೇನೆ. ಮಾನವ ಶೀಲವಂತನಾಗಿ ಬಾಳಬೇಕು. ಧರ್ಮಶೀಲನಾಗಿ, ಕ್ಷಮಾಶೀಲನಾಗಿ ಜೀವಿಸಬೇಕು. ಇಂತಹ ಶೀಲವೇ ಧರ್ಮದ ಮೂಲ. ಇದೇ ಅನುಕಂಪೆ, ಇದೇ ಮೈತ್ರಿ....

[ಆತನ ಧ್ವನಿ ಹಿನ್ನೆಲೆಗೆ ಸರಿಯುತ್ತ ಒಮ್ಮೆ ಪೂರ್ಣಲಯವಾಗಲು, ಇತ್ತ ಕಲಾಬುಪಿನ ಕನವರಿಕೆಯ ಧ್ವನಿ ಕ್ರಮವಾಗಿ ವೃದ್ಧಿಯಾಗುವುದು.]

ಕಲಾಬು :—(ಅರೆ ಎಚ್ಚರದಲ್ಲಿ) ಪದ್ಮಾವತಿ....

ಪದ್ಮಾ:—ಪ್ರಭು! ಪ್ರಭು!

ಕಲಾಬು :—ಆ್ಞ? ನೀನು!—ನೀನೇ ಅಲ್ಲವೆ, ಪದ್ಮಾವತಿ? ನನ್ನ ಎದುರಿನಲ್ಲೇ ಇರುವಿಯಷ್ಟೆ?

ಪದ್ಮಾ:—ಹೌದು, ಪ್ರಭು. ನಾನೆ! ಪದ್ಮಾವತಿ! ನಿಮ್ಮ ಎದುರಲ್ಲೆ ಇದ್ದೇನೆ.

ಕಲಾಬು :—ಸರಿ....ಅವರೆಲ್ಲಿ, ನರ್ತಕಿಯರು?

ಪದ್ಮಾ:—ಎಲ್ಲೊ ಸುತ್ತಾಡುತ್ತ ಹೋಗಿರಬೇಕು, ಪ್ರಭು. ಅವರಿಗೆ ಇನ್ನೇನು ಕೆಲಸ!

ಕಲಾಬು :—ನನ್ನ ಆಜ್ಞೆಯನ್ನು ಮರೆತು ಸುತ್ತಾಡಲು ಹೋದರೆ?

ಪದ್ಮಾ:—ಈ ಕ್ಷಣದಲ್ಲಿ ಅವರನ್ನು ಕರೆಸುತ್ತೇನೆ, ಪ್ರಭು!....ಏಯ್, ಚೇಟಿ....ಓ, ಬರುತ್ತಿದ್ದಾರೆ, ಪ್ರಭು.

ಕಲಾಬು :—ಪ....ದ್ಮಾ....ವ....ತಿ....

ಪದ್ಮಾ:—ಆಯಾಸವೆ, ಪ್ರಭು?

ಕಲಾಬು :—ಆಯಾಸವಲ್ಲ,....ಅಮಲು!......ನಿನ್ನನ್ನು ನೋಡುತ್ತಿರುವ ಅಮಲು!....

[ಪೈಜಣದ ಹೆಜ್ಜೆಗಳು ವೃದ್ಧಿಸುವುವು]

ಕಲಾಬು :—ಚಂಡಾಲಿನಿಯರೆ, ಎಲ್ಲಿ ಹೋಗಿದ್ದಿರಿ? ರಾಜಾಜ್ಞೆಯ ಉಲ್ಲಂಘನೆಗಾಗಿ ನಿಮಗೆ ಘೋರಶಿಕ್ಷೆಯಾಗಬೇಕು!

ಮಂಜರಿ :—ಇದೊಂದುಬಾರಿ ಮನ್ನಿಸಬೇಕು, ಪ್ರಭು. ತಮ್ಮ ನಿದ್ರೆಗೆ ಭಂಗಬಂದೀತೆಂದು ನೃತ್ಯವಾದ್ಯಗಳನ್ನು ನಿಲ್ಲಿಸಿ ಇಲ್ಲೇ ಸುತ್ತಾಡುತ್ತಿದ್ದೆವು....

ಸುಕನ್ಯೆ :—ಇಲ್ಲಿಯೇ ಶ್ರಮಣರೊಬ್ಬರು ಧರ್ಮೋಪದೇಶ ಮಾಡುತ್ತಿದ್ದರು. ಅದನ್ನು ಕೇಳುತ್ತ ಕುಳಿತದ್ದರಿಂದ ತಡವಾಗಿ ಹೋಯಿತು.

ಕಲಾಬು :—ಏನು? ಬಡಜೋಗಿಯೊಬ್ಬನು ನಿಮ್ಮನ್ನು ಆಕರ್ಷಿಸಿದನೆ? ಆ ನೀಚನು ಈ ರಾಜೋದ್ಯಾನದಲ್ಲಿ ಬಂದಿರಲು ಯಾರು ಅಪ್ಪಣೆ

ಕೊಟ್ಟರು ?....ಚೇಟಿ, ಒಡನೆಯೇ ಆ ಕಪಟಯತಿಯನ್ನು ಕರೆದು ತಾ. ಆತನಿಗೆ ತಕ್ಕ ಶಾಸ್ತಿಯಾಗಬೇಕು.

ಶಾಂತಲಾ :—ಕ್ಷಮಿಸಬೇಕು ಪ್ರಭು. ಆ ಭಿಕ್ಷುವಿನ ಮೇಲೆ ಕೋಪಗೊಳ್ಳ ಬಾರದು. ಅವರು ಯಾರಿಗೂ ಯಾವ ರೀತಿಯಲ್ಲೂ ತೊಂದರೆ ಕೊಡುವವರಲ್ಲ. ತಡವಾಗಿಬಂದ ತಪ್ಪು ನಮ್ಮದು.

ಕಲಾಬು :—ನಮಗೆ ನಿಮ್ಮ ವಿವರಣೆ ಬೇಕಿಲ್ಲ.

ಪದ್ಮಾ :—ಮಹಾರಾಜರಿಗೂ ಸಲಹೆಕೊಡುತ್ತಾಳೆ !–ಚೇಟಿ ಬೇಗ ಹೋಗು. ಹ್ಞು, ಧರ್ಮಬೋಧೆ ! ಮಹಾರಾಜ, ಇದಕ್ಕಿಂತ ಸುಲಭವಾದ ಕಾರ್ಯ ಮತ್ತೊಂದಿಲ್ಲ. ಅದಕ್ಕೇ ಅನೇಕಜನ ಆ ವೃತ್ತಿಯನ್ನು ಅವಲಂಬಿಸುತ್ತಾರೆ !

ಕಲಾಬು :—ನಮ್ಮ ರಾಜ್ಯದಲ್ಲಿ ಯಾವನ ಧರ್ಮಬೋಧೆಯೂ ಬೇಕಿಲ್ಲ. ಜನ ಈಗಾಗಲೇ ಆಲಸಿಗಳಾಗಿರುವುದು ಸಾಕು !

ಪದ್ಮಾ :—ಹೇಗೆ ಎದೆಯುಬ್ಬಿಸಿ ಬರುತ್ತಿದ್ದಾನೆ ಆ ಭಿಕ್ಷು !

[ಹೆಜ್ಜೆಯ ಸದ್ದು ವೃದ್ಧಿಸುವುದು]

ಬೋಧಿ :—ಮಹಾರಾಜಾ, ನನ್ನನ್ನು ಕರೆತರಲು ಆಜ್ಞೆಯಾಯಿತಂತೆ.

ಕಲಾಬು :—ಹೌದು. ನಾವೇ ಆಜ್ಞೆಮಾಡಿದ್ದೇವೆ. ಕ್ಷಪಣಕ, ನೀನು ಯಾರು ? ಮೊದಲು ತಿಳಿಸು.

ಬೋಧಿ :—ನಾನೊಬ್ಬ ಭಿಕ್ಷು ಮಹಾರಾಜ !

ಕಲಾಬು :—ಭಿಕ್ಷು !—ನಿನ್ನ ಕೆಲಸವೇನು ?

ಬೋಧಿ :—ದೇಶಸಂಚಾರ.

ಕಲಾಬು :—ದೇಶಸಂಚಾರವೇ ನಿನ್ನ ಕೆಲಸ !....ಹ್ಞು ! ನೀನು ರಾಜಾಪ ರಾಧಮಾಡಿದ್ದೀಯೆ. ಅದಕ್ಕಾಗಿ ನಿನಗೆ ಶಿಕ್ಷೆ ವಿಧಿಸುತ್ತೇವೆ. ಏನೆನ್ನುತ್ತೀಯೆ ?

ಬೋಧಿ :—ಅನುಭವಿಸುತ್ತೇನೆ, ಮಹಾರಾಜ. ನಾವು ಭಿಕ್ಷುಗಳು ; ಕ್ಷಾಂತಿ ವಾದಿಗಳು.

ಕಲಾಬು :—ಕ್ಷಾಂತಿವಾದಿ !....ನೀನೊಬ್ಬ ದೊಡ್ಡ ಅಹಿಂಸಾವ್ರತಾಚಾರ್ಯ.

ಒಳ್ಳೆಯದು. ನಿನ್ನ ಕ್ಷಾಂತಿಯ ಪರೀಕ್ಷೆಯಾಗುವುದು!—
ಚೇಟಿ, ಒಡನೆಯೇ ಚಂಡಾಲರನ್ನು ಬರಮಾಡು!

[ನರ್ತಕಿಯರು ಅಸಹಾಯಕರಾಗಿ ಭಯದಿಂದ 'ಅಯ್ಯೋ' ಎಂದು ಉದ್ಗರಿಸುವರು]

ಕಲಾಬು :—ಈಗ ನಿನ್ನ ಕ್ಷಾಂತಿ ಹೇಗೆ ಪರೀಕ್ಷಿತವಾಗುತ್ತದೆ ಬಲ್ಲೆಯಾ, ಭಿಕ್ಷು?

ಬೋಧಿ :—ಅದಕ್ಕೆ ನಾನು ಬೆದರುವುದಿಲ್ಲ ಮಹಾರಾಜ.

ಪದ್ಮಾ:—ಅಬ್ಬ ಎಷ್ಟು ಧೈರ್ಯ ಈತನಿಗೆ! ಮಹಾಪ್ರಭುಗಳ ಎದುರು ಹೇಗೆ ಎದೆಯುಬ್ಬಿಸಿ ಮಾತನಾಡುತ್ತಿದ್ದಾನೆ!

ಬೋಧಿ :—ಕ್ಷಾಂತಿವಾದಿಗಳಾದ ಭಿಕ್ಷುಗಳಿಗೆ ಬೆದರಿಕೆಯೆಂಬುದಿಲ್ಲ, ತಾಯಿ.

ಕಲಾಬು :—(ಅಟ್ಟಹಾಸದಿಂದ ನಗುವನು.)

[ಹೆಜ್ಜೆಗಳ ಸದ್ದು ವೃದ್ಧಿಸುವುದು]

ಕಲಾಬು :—ಚಂಡಾಲರೆ, ಈ ಕಪಟ ಕ್ಷಪಣಕನನ್ನು ಹಿಡಿದು ಎದುರಿನ ಕಂಬಕ್ಕೆ ಕಟ್ಟಿ ಮುಳ್ಳಿನ ಕಶೆಯಿಂದ ನೂರುಬಾರಿ ಪ್ರಹರಿಸಿ!

ನರ್ತಕಿಯರು :—ಅಯ್ಯೋ!

[ಮರಕ್ಕೆ ಕಟ್ಟಿದ ಮತ್ತು ಕಶಾಪ್ರಹಾರದ ಸದ್ದು. ಒಂದೆರಡುಬಾರಿ ಪ್ರಹಾರವಾಗಲು ನರ್ತಕಿಯರು ಕಿಟಾರನೆ ಕಿರಚುವರು.]

ಕಲಾಬು :—ತೊಲಗಿಹೋಗಿ, ಇಲ್ಲಿಂದ!

[ನರ್ತಕಿಯರು ಹೆಜ್ಜೆಗೆಟ್ಟು ಓಡುವರು. ಕಶಾಪ್ರಹಾರ ಸತತವಾಗಿ ಸಾಗುತ್ತದೆ.]

ಕಲಾಬು :—ಹ್ಞ! ಇನ್ನೂ ನೂರು ಪ್ರಹಾರ!....

[ಮತ್ತೆ ಪ್ರಹಾರ]

ಪದ್ಮಾ:—ಅಯ್ಯೋ, ಅವನ ಮೆಯ್ಯಿಂದ ನೆತ್ತರು ಹೇಗೆ ಚಿಮ್ಮುತ್ತದೆ! ಅಬ್ಬಬ್ಬ!

[ಪ್ರಹಾರ ಏಕಪ್ರಕಾರವಾಗಿ ನಡೆಯುತ್ತಿರಲು]

ಕಲಾಬು :—....ಇನ್ನಿಷ್ಟು ಮದ್ಯವನ್ನು ಕೊಡು!

ಪದ್ಮಾ:—ತೆಗೆದುಕೊಳ್ಳಿ, ಪ್ರಭು....ಪ್ರಭು,—ಪಾಪ, ತುಂಬಾ ಬಳಲುತ್ತಿ

ದ್ದಾನೆ. ಬಿಟ್ಟುಬಿಡಬಾರದೆ? ಅವನ ಜೀವ ಎಷ್ಟು ನೊಂದು ಕೊಳ್ಳುತ್ತಿದೆಯೋ!

ಕಲಾಬು:—ನೀನೂ ನನಗೆ ಬುದ್ಧಿ ಹೇಳುವವಳು!....ಹೊರಡು; ನೀನೂ ಇಲ್ಲಿ ಇರಕೂಡದು.

ಪದ್ಮಾ:—ಪ್ರಭು....

ಕಲಾಬು:—ಹ್ಞ, ತೊಲಗು!

[ಹೆಜ್ಜೆ ಕ್ಷಯಿಸುವುದು. ಪ್ರಹಾರದ ಸದ್ದು ಮುಂದುವರಿಯುವುದು.]

ಕಲಾಬು:—ಸಾಕು, ನಿಲ್ಲಿಸಿ. ಬೈರಾಗಿ, ಏನು ಹೇಳುವೆ?

ಬೋಧಿ:—ಮಹಾರಾಜ, ನಾನು ಕ್ಷಾಂತಿವಾದಿ.

ಕಲಾಬು:—ಒಳ್ಳೆಯದು....ಈತನ ಕೈಗಳನ್ನು ಕತ್ತರಿಸಿ. ಹ್ಞ! ಏನು ನೋಡುತ್ತಿರುವಿರಿ?

[ಕೈಗಳನ್ನು ಕತ್ತರಿಸಿದ ಸದ್ದು]

ಕಲಾಬು:—ಚೇಟಿ, ಮದ್ಯವನ್ನು ಕೊಡು....ಅವನ ಕಾಲುಗಳನ್ನೂ ಕತ್ತರಿಸಿ....ಬೇಗ!....ಚೇಟಿ, ಮದ್ಯ....

[ಕಾಲುಗಳನ್ನು ಕತ್ತರಿಸಿದ ಸದ್ದು]

ಕಲಾಬು:—ಜಟಿಲ, ಈಗ ಏನೆನ್ನುವೆ?

ಬೋಧಿ:—ಕ್ಷಾಂತಿಯೆಂಬುದು ನನ್ನ ಕೈಗಳಲ್ಲಿಲ್ಲ, ಕಾಲುಗಳಲ್ಲಿಲ್ಲ. ಮಹಾರಾಜ, ಅದು ಇನ್ನೂ ಆಳದಲ್ಲಿ ಪ್ರತಿಷ್ಠಿತವಾಗಿದೆ.

ಕಲಾಬು:—ಇಷ್ಟು ಸೊಕ್ಕು! ಇವನ ಕಿವಿಮೂಗುಗಳನ್ನು ಕತ್ತರಿಸಿ!

[ಕತ್ತರಿಸುವ ಸದ್ದು]

ಕಲಾಬು:—ಈಗಲೂ ನೀನು ಕ್ಷಾಂತಿವಾದಿಯೇ, ಶ್ರಮಣ?

ಬೋಧಿ:—ಅಂತರಾಳದ ಕ್ಷಾಂತಿಯನ್ನು ಅಷ್ಟು ಸುಲಭವಾಗಿ ಕಲಕಲಾರೆ, ಮಹಾರಾಜ. ನಾನು ಈಗಲೂ ಕ್ಷಾಂತಿವಾದಿ. ಪ್ರಾಣವಿರುವ ಪರ್ಯಂತ ಕ್ಷಾಂತಿವಾದಿಯಾಗಿಯೇ ಇರುತ್ತೇನೆ!

ಕಲಾಬು:—ಹ್ಞ! ನಿನ್ನ ಕ್ಷಾಂತಿಯನ್ನು ಕೂಡಿ ಬಿದ್ದಿರು!....ಚೇಟಿ, ಮದ್ಯ....ಎಲ್ಲರೂ ಇಲ್ಲಿಂದ ಹೊರಟು ನಡೆಯಿರಿ. ಅವನೊಬ್ಬನೇ

ಬಿದ್ದಿರಲಿ!....ಬರುತ್ತೇನೆ, ಕ್ಷಾಂತಿವಾದಿ......(ಅಟ್ಟಹಾಸದಿಂದ ನಕ್ಕು ತೆರಳುವನು.)

[ಒಂದು ಕ್ಷಣ ಶೋಕಗೀತೆಯ ತಾನಗಳು ಹೃದಯಸ್ಪರ್ಶಿಯಾಗಿ ಕೇಳುತ್ತವೆ. ಅನಂತರ :]

ಬೋಧಿ :—(ಕ್ಷೀಣ ಗಂಭೀರ ಧ್ವನಿಯಲ್ಲಿ)

‘ ಯತ್ನೇನ ಪಾಪಾನಿ ಸಮಾಚರಂತಿ
ಧರ್ಮಂ ಪ್ರಸಂಗಾದಪಿ ನಾಚರಂತಿ
ಆಶ್ಚರ್ಯಮೇತದ್ಧಿ ಮನುಷ್ಯಲೋಕೇ
ಕ್ಷೀರಂ ಪರಿತ್ಯಜ್ಯ ವಿಷಂ ಪಿಬಂತಿ....’

[ಓಡಿಬರುವ ಹೆಜ್ಜೆಯ ಸದ್ದು]

ಕಲ್ಯಾಣ :—ಪ್ರಮಾದವಾಯಿತು, ಭಗವನ್, ಮಹಾಪಾತಕವಾಯಿತು !

ಬೋಧಿ :—ಬಾ, ಕಲ್ಯಾಣ ; ಸರಿಯಾದ ಕಾಲದಲ್ಲಿ ಬಂದಿದ್ದೀಯೆ.

ಕಲ್ಯಾಣ :—ಅಯ್ಯೋ, ನನ್ನಂತಹ ಪಾಪಿಯಿಂದ ತಮಗೆ ಇಂತಹ ಪ್ರಮಾದವೊದಗಿತು, ಭಗವನ್ ! ಈ ಮಹಾಪಾತಕಕ್ಕೆ ಏನು ಪ್ರಾಯಶ್ಚಿತ್ತ ಮಾಡಿಕೊಳ್ಳಲಿ ?....ಅಯ್ಯೋ, ನಾನು ಪಾಪಿ ಭಗವನ್, ಪಾತಕಿ !

ಬೋಧಿ :—ಪರಿತಪಿಸಬೇಡ, ಕಲ್ಯಾಣ. ಎಲ್ಲವೂ ನಡೆಯಬೇಕಾದಂತೆಯೇ ನಡೆಯುವುದು.

ಕಲ್ಯಾಣ :—ಭಗವನ್....ಹೀಗೆ....ಮೆಲ್ಲಗೆ....ನನ್ನ ತೊಡೆಯಮೇಲೆ ತಲೆ ಯಿಟ್ಟುಕೊಳ್ಳಿ, ಭಗವನ್ !....ಅಯ್ಯೋ! ನಾನೆಂತಹ ಮೂರ್ಖ ಭಗವನ್ ! ತಮ್ಮನ್ನು ಕೊಲೆಮಾಡಿದವನು ನಾನೆ !....ಅಯ್ಯೋ !

ಬೋಧಿ :—ಕಲ್ಯಾಣ, ಇದಕ್ಕೆ ಜ್ಞಾನಿಗಳು ಚಿಂತಿಸಬಾರದು. ಇಹಜೀವಿ ಗಳಿಗೆ ಹುಟ್ಟುಸಾವುಗಳು ಅನಿವಾರ್ಯವಾದವು. ‘ ನಾಭಿನಂದಾಮಿ ಮರಣಂ ; ನಾಭಿನಂದಾಮಿ ಜೀವಿತಂ ’....ನಮ್ಮ ಅನಂತ ಜೀವನದ ಒಂದೊಂದು ನೆಲೆ ಈ ಜೀವನ.

ಕಲ್ಯಾಣ :—ಈ ಲೋಕದಲ್ಲಿ ಧರ್ಮವು ಸತ್ತಿತು, ಸ್ವಾಮಿನ್ ! ಈಗ ಉಳಿ

ದಿರುವುದು ಅಧರ್ಮ ಮಾತ್ರ. ಧರ್ಮಕ್ಕೆ ಈ ಲೋಕದಲ್ಲಿ ಬೆಲೆಯಿಲ್ಲ.

ಬೋಧಿ :—ಅಷ್ಟೇಕೆ ವಿಚಲಿತವಾಗುತ್ತೀಯೆ, ಕಲ್ಯಾಣ? ಧರ್ಮ ಚಿರಂತನವಾದುದು. ಅದಕ್ಕೆ ಮರಣವಿಲ್ಲ .... ಈಗಲೂ ಧರ್ಮ ಜೀವಂತವಾಗಿದೆ, ಜ್ವಲಂತವಾಗಿದೆ! ಮನುಷ್ಯ ಸತ್ತರೂ ಧರ್ಮದ ಹಿಡಿತದಿಂದ ತಪ್ಪಿಸಿಕೊಳ್ಳಲಾರ. ಧರ್ಮ ಅರಳುವಾಗ ಅದರ ಕಂಪನವಿನ್ಯಾಸವನ್ನು ಕಂಡು ಅದನ್ನೇ ಅಧರ್ಮವೆಂದು ತಿಳಿಯುತ್ತೇವೆ ನಾವು. ಅದು ಭ್ರಾಂತಿ.

ಕಲ್ಯಾಣ :—ಭಗವನ್, ನಮ್ಮೆಲ್ಲರ ದೌರ್ಭಾಗ್ಯದಿಂದ ಹೀಗಾಯಿತು. ಅದರ ಫಲವನ್ನು ಒಂದಕ್ಕೆ ಎರಡಾಗಿ ನಾವು ಅನುಭವಿಸುವಂತಾಗಲಿ, ಭಗವನ್! ಅದಕ್ಕೆ ಈ ನಿನ್ನ ಪಾದವೇ ಸಾಕ್ಷಿಯಾಗಿರಲಿ .... ನಿನ್ನ ಕೈಕಾಲುಗಳನ್ನು ಕತ್ತರಿಸಿದ ಆ ನೀಚ ರಾಜನನ್ನು ಮೊದಲು ಬಲಿಯಿಕ್ಕಿ ಅನಂತರ ನನ್ನ ಪ್ರಾಯಶ್ಚಿತ್ತಕ್ಕೆ ಸಿದ್ಧನಾಗುತ್ತೇನೆ.

ಬೋಧಿ :—ಸ್ಥಿರನಾಗು ಕಲ್ಯಾಣ .... ನನ್ನ ಕೈಕಾಲುಗಳನ್ನು ಕತ್ತರಿಸಿದ ರಾಜನು ಚಿರಕಾಲ ಜೀವಿಸಲಿ! ನನ್ನಂತಹವರು ಕೋಪಿಸುವುದಿಲ್ಲ.

ಕಲ್ಯಾಣ :—ಇದೇನು ಅಪ್ಪಣೆ ಕೊಡಿಸುತ್ತಿದ್ದೀರಿ, ಭಗವನ್?

ಬೋಧಿ :—ಕಲ್ಯಾಣ, ನಾನಿನ್ನು ವಿಶ್ರಾಂತನಾಗುತ್ತೇನೆ .... ಒಂದು ಕ್ಷಣ ವಿಶ್ರಾಂತಿ; ಅನಂತರ ಮತ್ತೆ ಇನ್ನೊಬ್ಬ ತಾಯಿ ನನ್ನನ್ನು ಧರಿಸಿ ಕೃತಾರ್ಥಳಾಗಲಿ.... ನಿನ್ನಲ್ಲಿ ನನ್ನ ಕೊನೆಯ ಮಾತು ಕಲ್ಯಾಣ: ನೀವು ನನಗಾಗಿ ಶೋಕಿಸಬಾರದು; ನೀವು ನನಗಾಗಿ ಯಾರನ್ನೂ ದ್ವೇಷಿಸಬಾರದು; ನಿಮ್ಮನ್ನೂ ದ್ವೇಷಿಸಿಕೊಳ್ಳಬಾರದು........
'ಕ್ಷಮಾಮಿ ಸರ್ವ ಜೀವಾಣಾಂ। ಸರ್ವೇ ಜೀವಾ ಕ್ಷಮಂತು ಮೇ
ಮೈತ್ರೀ ಮೇ ಸರ್ವಭೂತೇಷು। ವೈರಂ ಮೇಸ್ತಿನ ಕೇನ ಚ....'

[ಗಂಭೀರಗೀತದ ದೀರ್ಘತಾನಗಳು ಅನುರಣಿಸಿ ನಾಟಕದ ಮುಕ್ತಾಯವನ್ನು ಸೂಚಿಸುವುವು.]

———

# ವೀರಮಾತೆ

ಪಾತ್ರಗಳು: ಸದಾಶಿವನಾಯಕ,
ಸೋದೆಯ ಅರಸು,
ಸೂರಪ್ಪಯ್ಯ,
ರಂಗ,
ಹಿರಿಯವ್ವ;
ಹಿನ್ನೆಲೆಯಲ್ಲಿ: ಸೈನಿಕರು.

ಸ್ಥಳ: ಇಕ್ಕೇರಿಯ ಸಮೀಪದ ಒಂದು ಗುಡ್ಡದ ಮೇಲೆ ನಿರ್ಮಿತವಾಗಿರುವ ಸುಸಜ್ಜಿತವಾದ ಯುದ್ಧಶಿಬಿರ.

[ನಾಟಕದ ಆರಂಭದಲ್ಲಿ ರಂಗದ ಹೊರಭಾಗದಲ್ಲೆಂಬಂತೆ ಸೈನಿಕರ ನಗು ಗದ್ದಲ ಕೇಳಿಸುತ್ತಿರುತ್ತದೆ. ಸಂಗಡ ಅವರ ಸಂತೋಷಗೀತೆ:

ಮೇಳ: ದಂಡಿಗೆ ಸೇರದ ಗಂಡ್ಯಾತಕಿರಬೇಕು
ಗುಂಡಿಗೆಯ ರಕ್ತ ಸ್ವಾಮಿಗೆ
ಗುಂಡಿಗೆಯ ರಕ್ತ ಸ್ವಾಮಿಗೆ ಚೆಲ್ಲದ
ಗಂಡ್ಯಾತಕಿರಬೇಕು ನೆಲದಾಗೆ ....

ಅಷ್ಟರಲ್ಲಿ 'ಕೊssssss ಹೂssssss ಹೂssssss....' ಎಂಬ ಅತಿ ದೂರದ ಕೂಗು. ಹಾಡು ಗದ್ದಲ ನಿಲ್ಲುವುದು. ಮೇಲಿನ ಕೂಗಿಗೆ ಮರುದನಿ ಕೊಡುವ, ತುಸು ದೂರದ ಕೂಗು: 'ಕೊssssss ಹೂssssss ಹೂssssss....'; ಮತ್ತೆ ಸೈನಿಕರ ನಡುವಿನಿಂದ ಎರಡನೆಯ ಕೂಗಿಗೆ ಉತ್ತರವೆಂಬಂತೆ: 'ಕೊssssss ಹೂssssss ಹೂssssss....'. ವೃದ್ಧಿಸುತ್ತ ಬಂದು ರಂಗದ ಹೊರಭಾಗದಲ್ಲಿ ನಿಲ್ಲುವ ಕುದುರೆಯ ಖುರಪುಟಧ್ವನಿ. ರಂಗದ ಹೊರಭಾಗದಲ್ಲಿಯೇ ಮಾತುಗಳು:

'ಸದಾಶಿವ ನಾಯಕರಿದ್ದಾರೇನು?'

'ಹೌದು ಒಡೇರೇ'

'ಸರಿ. ಹೋಗಿ ಸೋದೆಯ ಅರಸರು ಬಂದಿದಾರೆ ಅಂತ ತಿಳಿಸು.'
ರಂಗದತ್ತ ವೃದ್ಧಿಸುವ ಹೆಜ್ಜೆಯ ಸದ್ದು. ಮುಂದೆ ರಂಗದಲ್ಲೆ ಸಂಭಾಷಣೆ:]

ರಂಗ:—ನಾಯಕರೆ, ಸೋದೆ ಅರಸರು ಬಂದಿದಾರೆ. ನಾಯಕರಿಗೆ ಕಾಣಿಸಿಕೊಳ್ಳೋದಿದೆಯಂತೆ.

ಸದಾಶಿವ:—ಒಳ್ಳೇದು. ಅವರನ್ನ ಒಳಗೆ ಕರೆದು ತಾ.
[ಹೆಜ್ಜೆ ಕ್ಷಯಿಸುತ್ತದೆ – ಮೌನ – ಹೆಜ್ಜೆ ವೃದ್ಧಿಸುತ್ತದೆ]

ಸದಾಶಿವ:—ಬರಬೇಕು, ಅರಸರೆ ಕುಳಿತುಕೊಳ್ಳಿ. ತಮಗೆ ತುಂಬಾ ಶ್ರಮ ಆಗಿರಬೇಕು.

ಅರಸು:—ಶ್ರಮ ಏನು ಬಿಡಿ, ನಾಯಕರೆ. ಎಲ್ಲಕ್ಕಿಂತ ಈ ಕೆಳಿತನ ಮುಖ್ಯ.

ಸದಾಶಿವ:—ನಿಮ್ಮ ಅಭಿಮಾನ ಅರಸರೆ. ಮತ್ತೆ ನಿಮ್ಮ ರಾಜ್ಯದಲ್ಲಿ ಎಲ್ಲಾ ಒಳ್ಳೇದು ಅಲ್ಲ?

ಅರಸು:—ಎಲ್ಲಾ ಒಳ್ಳೇದಾಗಿ ನಡೀತಾ ಇದೆ, ನಾಯಕರೆ....ವಾರದ ಹಿಂದೆ ನಿಮ್ಮ ಓಲೆ ಬಂದಿತು. ಬಿಳಿಗಿ ಅರಸರೂ ತಮಗೆ ನಾಯಕರಿಂದ ಪತ್ರ ಬಂದಿದೆ ಅಂತ ತಿಳಿಸಿದರು. ಇಬ್ಬರೂ ಕೂಡಿ ನಮ್ಮ ನಮ್ಮ ಪಡೆಯನ್ನ ಅಣಿಮಾಡಿಕೊಂಡು ಬರೋದರಲ್ಲಿ ಇಷ್ಟು ವೇಳೆ ಆಯಿತು.

ಸದಾಶಿವ:—ಏನೂ ಭಯವಿಲ್ಲ, ಅರಸರೆ. ನಮಗೆ ತೊಂದರೆ ಏನೂ ಆಗಲಿಲ್ಲ. ಒಟ್ಟಿನಲ್ಲಿ ನೀವೂ ಬಿಳಿಗಿ ಅರಸರೂ ನಮ್ಮ ಮೇಲೆ ಇಷ್ಟು ಕೆಳೆ ಇರಿಸಿರೋದು ಒಂದು ದೊಡ್ಡ ಸಂತೋಷ. ಬಿಳಿಗಿ ಅರಸರೂ ಬಂದಿದಾರೆ, ಅಲ್ಲ?

ಅರಸು:—ಬಂದಿದಾರೆ ನಾಯಕರೆ. ಸಂಜೆಹೊತ್ತಿಗೆ ನಾವು ಎರಡು ಪಡೆಯವರೂ ಕೂಡಿ ಸಿರಿವಂತೆ ಹತ್ತಿರ ಬಂದು ಬೀಡುಬಿಟ್ಟೆವು. ತಮಗೆ ಈ ಸುದ್ದಿ ತಿಳಿಸುವ ಸಲುವಾಗಿ ನಾವು ಮುಂದಾಗಿ ಬಂದೆವಿ.

ಸದಾಶಿವ:—ತುಂಬಾ ಸಹಾಯವಾಯಿತು, ಅರಸರೆ. ಕಾಳಗ ಆರಂಭವಾಗಿ ಆರು ದಿನ ಆಗಿದೆ. ಏನು ಕಾಳಗ ಅಂತೀರಿ! –ಮಲೆಗಾಡಿನ ಜನ ಇಷ್ಟುದಿನ ಕಂಡು ಅರಿಯರು! ಅಂಥಾ ಕಾಳಗ! – ಇಷ್ಟ

ರಲ್ಲೇ ವೀರಭದ್ರನಾಯಕನ ಪಡೆಯವರು ಸೋತು ಸುಣ್ಣವಾಗಿ ದಾರೆ. ನಾಳೆ ಅಲ್ಲ ನಾಡಿದ್ದು ವಿಜಯದಶಮಿ. ಅಷ್ಟುಹೊತ್ತಿಗೆ ಇಕ್ಕೇರಿ ಕೋಟೆ ಚೂರುಚೂರಾಗಿ ನಾಡು ನಮ್ಮ ಪಾಲು ಆದೀತು ಅಂತ ನಿರ್ಧರಿಸಿದ್ದೇವೆ. ಸಿರಿವಂತೆ ತಾವ ಬೀಡು ಬಿಟ್ಟಿದ್ದರೆ ಅವರು ಇತ್ತಕಡೆ ರಾತ್ರೀನೆ ಪಯಣ ಹೊರಡುತಾರೆ ಅಲ್ಲ ?

ಅರಸು :—ಹೌದು ನಾಯಕರೆ. ಸಂಜೆ ಸ್ವಲ್ಪ ದಣುವಾರಿಸಿಕೊಂಡು ನಡುರಾತ್ರಿಗೆ ಸಮು ಹೊರಡುತಾರೆ.

ಸದಾಶಿವ :—ಸರಿ, ನಡುರಾತ್ರೆ ಹೊರಟರೆ–ಆರಿಲು ಬೆಳಕು ಇರುತದೆ— ಹೊತ್ತಾರೆ ಒಂದು ಯಾಮ ಇರೋದಕ್ಕೆ ಮುಂದೇನೇ ಅವರು ಇಲ್ಲಿಗೆ ಬಂದಿರುತಾರೆ. ನಾಳೆ ಕಾಳೆಗಕ್ಕೆ ನಿಮ್ಮ ನೆರವು ಒದಗೋ ಕಾರಣ ನಾಳೆ ಒಂದು ದಿನಕ್ಕೆ ಇಕ್ಕೇರಿಕೋಟೆ ಇಲ್ಲ ಅನ್ನಿಸಿಬಿಡ ಬಹುದು.

ಅರಸು :—ನಾವಂತೂ ನಮ್ಮ ಕೈಲಾಗುವಷ್ಟು ನೆರವಾಗುತೇವೆ. ಒಟ್ಟಿನಲ್ಲಿ, ನಮಗೂ ಇಕ್ಕೇರಿಯವರಿಗೂ ಮೊದಲಿನಿಂದ ಇರುವ ವೈರ ನೀವು ಬಲ್ಲಿರಿ. ಈ ಇಕ್ಕೇರಿಯವರ ಕಾಟ ಕಿರುಕುಳ ಇಲ್ಲದೆ ಇರೋದಾದರೆ ನಾವು ಮಲೆನಾಡು ಪೂರಾ ವಶಮಾಡಿಕೊಂಡೇವು. ಇಕ್ಕೇರಿಯವರನ್ನ ಮುರೀದೇ ಹೋದರೆ ನಮಗೆ ಎಂದು ಇದ್ದರೂ ಪೆಟ್ಟು ತಪ್ಪೋದಲ್ಲ– ಹಾಗಂತ ನಿಮ್ಮಂಥವರು ಅರಸರಾದರೆ ಮೂವರೂ ನಂಟುತನದಿಂದ ಇರಬಹುದು.

ಸದಾಶಿವ :—ನಿಜ, ಅರಸರೆ. ನೀವು ಹೇಳಿದಹಾಗೆ ನಂಟುತನ ಇರಬೇಕು. ರಾಜ್ಯಪಡೆಯೋದು ಮಾತ್ರ ನಮ್ಮ ಬಯಕೆ ಅಲ್ಲ. ರಾಜ್ಯವನ್ನ ಚೆನ್ನಾಗಿ ಇಟ್ಟುಕೋಬೇಕು. ಬದಿಯರಾಜರ ತಾವ ಕೆಳೆ ಇರ ಬೇಕು. ಆಗ ರಾಜ್ಯ ಚಿಕ್ಕದಾದರೂ ಚೊಕ್ಕವಾಗಿ ಇರುತದೆ.

ಅರಸು :—ಅದನ್ನೇ ನಾವು, ಸೋದೆ– ಬಿಳಿಗಿಯವರೂ ಬಯಸೋದು ನಾಯಕರೆ. ವರ್ಷದ ಹಿಂದೆ, ಇಕ್ಕೇರಿ ಸಿಂಹಾಸನಕ್ಕೆ ತಾವು ರಾಜರಾದಿರಿ ಅಂತ ಕೇಳಿದಾಗ ನಮಗೆ ತುಂಬಾ ಸಂತೋಷ

ವಾಗಿತ್ತು. ನಮ್ಮನಮ್ಮ ನಂಟು ಬೆಳೆದು ಎಲ್ಲಾ ಒಳಿತಾದೀತು ಅಂತ ಅಂದುಕೊಂಡಿದ್ದೆವಿ.

ಸದಾಶಿವ :—ಅರಸರೆ, ಇಲ್ಲಿ ನಾವು ಸಿಂಹಾಸನ ಏರಿದ್ದು ಮತ್ತೆ ನಡೆದ ಕಲಹ–ಈ ಸಂಗತಿ ಪೂರಾ ನಿಮಗೆ ತಿಳಿದಿರಲಾರದು, ಅಲ್ಲ?

ಅರಸು :—ಇಲ್ಲ, ನಾಯಕರೆ. ನಮಗೆ ನಂಟು ಅಲ್ಲದ ರಾಜ್ಯದ ಮನೆ ವಾರ್ತೆ ನಮಗೆ ತಿಳೀಬೇಕು ಹೇಗೆ? ಜನರ ಬಾಯಿಯಲ್ಲಿ ಚೂರುಪಾರು ಕೇಳಿದ್ದೆವಿ. ಆದರೆ, ಜನರ ಬಾಯಿಯಲ್ಲಿ ಸುದ್ದಿ ರೆಕ್ಕೆ ಪುಕ್ಕ ಬಂದು ಹಾರಾಡುತದೆ. ಅದರಲ್ಲಿ ನಂಬೋದು ಯಾವುದು–ಅಲ್ಲ?

ಸದಾಶಿವ : — ನಿಜ, ಅರಸರೆ. ಅದನ್ನೆಲ್ಲ ನಿಮ್ಮತಾವ ವಿವರವಾಗಿ ಹೇಳೋದು ಉಂಟು. ನೋಡಿ, ಈಗ ಆರು ವರುಷದ ಹಿಂದೆ ಹಿರಿಯ ವೆಂಕಟಪ್ಪನಾಯಕರು ಶಿವನಪಾದ ಸೇರಿದರಲ್ಲ; ಆಗಲೇ ಇಲ್ಲಿ ಒಡಕು ತೊಡಕು ಆರಂಭ ಆಗಿತ್ತು. ಆದರೆ ಹಿರೇರು ಹೋದ ಕಾಲ–ಹಾಗಂತ ನಾವೂ ತಡೆದೆವಿ. ಅವರ ಮೊಮ್ಮೊಗ–ನಮ್ಮ ಭಾವ–ಈ ವೀರಭದ್ರನಾಯಕ ಸಿಂಹಾಸನಕ್ಕೆ ಬಂದ. ಅದಕ್ಕೆ ನಾವು ಒಲ್ಲೆ ಅನ್ನಲಿಲ್ಲ.

ಅರಸು :—ತಪ್ಪು ತಿಳೀಬಾರದು; ಆದರೂ ನಮಗೆ ಅನ್ನಿಸುತ್ತದೆ, ನಾಯಕರೆ, ನೀವು ಆಗಲೇ ಸುಮ್ಮನಿರಬಾರದಿತ್ತು. ಆ ವೇಳೆಗೆ ನಾವು ತಮ್ಮ ಬಳಿ ಗುಟ್ಟಾಗಿ, ಇದನ್ನ ಕುರಿತು ಹೇಳೋದಕ್ಕೆ, ನಮ್ಮ ಹೆಗ್ಗಡೆಯನ್ನು ಅಟ್ಟಿದ್ದೆವಿ. ಅದೂ ನಿಮಗೆ ನೆನಪಿರಬೇಕು.

ಸದಾಶಿವ :—ನೀವು ಸಹಾಯ ಮಾಡುತೀರಿ ಅಂತ ತಿಳಿದೂ ಹಿರೇರ ನೆನಪಿನಿಂದ ತಡೆದೆವಿ. ಆಮೇಲೆ ವೀರಭದ್ರನಾಯಕ ಆರಗ ತೀರ್ಥ ರಾಜಪುರ–ಆ ಕಡೆ ಯುದ್ಧಮಾಡುತಾ ಹೊರಟ. ಹಾಗೆ ಅವ ನಗರದಿಂದ ಹೊರಟ ಸಮಯ ನಾವು ಪಟ್ಟ ಏರೋದು ದೊಡ್ಡ ಮಾತು ಆಗಿರಲಿಲ್ಲ. ಆದರೂ ನ್ಯಾಯದ ಮುಖ ನೋಡುತಾ ತಡೆದೆವಿ. ಅಷ್ಟುಹೊತ್ತಿಗೆ ಶಿವನಪಾದ ಸೇರಿದ ಹಿರಿಯ ವೆಂಕ

ಟಪ್ಪನಾಯಕರ ಅಣ್ಣನ ಮಗ, ವೀರವೊಡೆಯ ಪಟ್ಟಕಟ್ಟಿಸಿಕೊಂಡ.

ಅರಸು :—ಆ ಸುದ್ದಿ ನಮಗೆ ತಿಳಿದಿತ್ತು, ನಾಯಕರೆ. ವೀರಭದ್ರನಾಯಕ ಆ ಹೊತ್ತಿಗೆ ಕೌಲೆದುರ್ಗ ವಶಮಾಡಿಕೊಂಡು ಹಿಂತಿರುಗಿದರೂ, ಇಲ್ಲಿ ತನಗೆ ಎದುರಾಗಿ ಪಟ್ಟಕಟ್ಟಿಸಿಕೊಂಡ ವೀರವೊಡೆಯನ ಮೇಲೆ ದಂಡೆತ್ತಿ ಬರಲಿಲ್ಲ, ಸ್ವಸ್ಥವಾಗಿ ಹೋಗಿ ಆನಂದಪುರದ ಕೋಟೇಲಿ ವಾಸವಾಗಿದಾನೆ—ಅಂತ ಕೇಳಿದೆವಿ. ನಮಗೆ ಆಶ್ಚರ್ಯವಾಯಿತು.

ಸದಾಶಿವ :—ಅದೇ ನೋಡಿ ಅರಸರೆ!....ವೀರವೊಡೆಯ ಇಕ್ಕೇರಿಯಲ್ಲಿ ಪಟ್ಟ ಏರಿದಾಗಲೇ ಇಕ್ಕೇರಿ ಸಂಸ್ಥಾನ ಎರಡು ಭಾಗ ಆಯಿತು; ದೊರೆತನ ಎರಡು ಆಯಿತು. ಆಗ ಈ ವೀರಭದ್ರನಾಯಕ ಸುಮ್ಮನೆ ಉಳಿದ. ಅದೇ, ಪಟ್ಟ ಏರಿದರೂ ಅದೃಷ್ಟ ಇಲ್ಲದೆ ಆ ವೀರವೊಡೆಯ ಮರಣಹೊಂದಿದಾಗ ನಾವು ನಮ್ಮ ಪರಾಕ್ರಮದಿಂದ ಸಿಂಹಾಸನ ಕೈವಶ ಮಾಡಿಕೊಂಡೆವಿ.

ಅರಸು :—ನೀವೇನೂ ರಾಜ್ಯಕ್ಕೆ ತಪ್ಪಿ ನಡೀಲಿಲ್ಲ, ನಾಯಕರೆ. ರಾಜ್ಯದಲ್ಲಿ ನಿಮಗೂ ಬಾಧ್ಯತೆ ದೊರೆಯಬೇಕಾದದ್ದು ಸಹಜ ಇತ್ತು ಅಂತ ನಾವು ಕೇಳಿದ್ದೆವಿ.

ಸದಾಶಿವ :—ನಿಜ, ಅರಸರೆ. ಈ ಸಂಸ್ಥಾನದ ಬಾಧ್ಯತೆಗೆ ನಾವು ಹೊರಗಿನವರೇನೂ ಅಲ್ಲ. ವೀರಭದ್ರನಾಯಕನ ತಂಗಿಯನ್ನೆ ನಮಗೆ ಕೊಟ್ಟು ನಂಟು ಆಗಿದೆ. ಅಲ್ಲದೆ ನಾವು ರಾಜಮನೆತನಕ್ಕೆ ಸೇರಿದಂಥೋರು. ಹಾಗೆ ಹೇಳೋದಾದರೆ ವೀರವೊಡೆಯನಿಗೆ ಯಾವ ಅಧಿಕಾರ ಇದ್ದಿತು?

ಅರಸು :—ನಿಜ, ನಾಯಕರೆ....ಅಲ್ಲದೆ, ಕೆಟ್ಟಜನ—ಆಗಲೇ ಒಂದು ಸುದ್ದಿ ಹುಟ್ಟಿಸಿದ್ದರು; ಅದು ನಮ್ಮ ಕಿವಿಗೂ ಬಿದ್ದಿತ್ತು. ಆದರೆ ನಾವು ಅದನ್ನ ನಂಬಲಿಲ್ಲ.

ಸದಾಶಿವ :—ಯಾವದು?—ಆ ವೀರವೊಡೆಯನ ತಮ್ಮ ಬಸವಲಿಂಗನಾಯಕನನ್ನ ನಾವು ಅಂಗವಿಕಲ ಮಾಡಿಸಿದೆವಿ ಅಂತ—ಅಲ್ಲ?

ಅರಸು :—ಹೌದು, ನಾಯಕರೆ. ಏನೋ ಮಾಟ ಮಂತ್ರ ಮಾಡಿಸಿದರು ಅಂತ ಜನ ಅಂದುಕೋತಾ ಇದ್ದರಂತೆ. ಆದರೆ ನನಗೆ ಅದರಲ್ಲಿ ನಂಬುಗೆ ತೋರಲಿಲ್ಲ.

ಸದಾಶಿವ :—ಅರಸರೆ, ನೀವು ನಮ್ಮ ಹತ್ತಿರದ ನಂಟು ಆಗಿರೋವಾಗ ನಿಮ್ಮತಾವ ಯಾವುದನ್ನೂ ಮುಚ್ಚಿ ಇರಿಸೋ ಅಗತ್ಯ ಇಲ್ಲ. ಸತ್ಯಸಂಗತಿ ಹೇಳೋದು ಆದರೆ – ನಾವು ಆತನನ್ನ ಅಂಗವಿಕಲ ಮಾಡಿದೆವಿ, ನಿಜ. ಅದು ರಾಜಕಾರಣದಲ್ಲಿ ನಡೆಯೋದೆ. ಅದ ರಲ್ಲಿ ಏನೋ ದೊಡ್ಡ ತಪ್ಪು ಉಂಟು ಅಂತ ನಮಗೆ ಅನಿಸೋದಿಲ್ಲ.

ಅರಸು :—ಅನ್ನಿಸೋ ಕಾರಣ ಇಲ್ಲ, ನಾಯಕರೆ. ಹಿಂದೆ ಚಾಣಕ್ಯ ರಾಕ್ಷಸ ಅವರೆಲ್ಲ ಏನು ಏನು ಕೆಲಸ ಮಾಡಲಿಲ್ಲ, ಹೇಳಿ ! ರಾಜ ಕಾರಣದಲ್ಲಿ ಅವನ್ನೆಲ್ಲ ಒಂದು ತಪ್ಪು ಅಂತ ತಿಳಿಯೋದು ಭ್ರಾಂತು ಆಗುತದೆ.

ಸದಾಶಿವ :—ಇಷ್ಟಾಗಿ ನಾವು ಸಿಂಹಾಸನ ಏರಿ ನಾಲ್ಕುವಾರ ತೀರಲಿಲ್ಲ, ಆಗಲೇ ದಂಡೆತ್ತಿ ಬಂದ ಈ ವೀರಭದ್ರನಾಯಕ. ನಾವು ಅವನಿಗೆ ಹೆಗ್ಗಡೇರಿಂದ ಹೇಳಿಸಿದೆವಿ : ‘ ಇಕ್ಕೇರಿ ದೊರೆತನ ಎರಡಾದ್ದು ಇಂದಲ್ಲ, ಎಷ್ಟೋ ದಿನ ಆಯಿತು ; ಹಾಗೇ ನಡೀಲೇಳಿ ; ಬಾಧ್ಯತೆ ಇಲ್ಲದೆ ಪಟ್ಟ ಏರಿದ ಪ್ರಸಂಗ ಏನೂ ಇಲ್ಲ ’ ಅಂತ.

ಅರಸು :—ಹ್ಞು !.... ಈ ವಿವೇಕಕ್ಕೂ ಒಲ್ಲೆ ಅಂದ, ಈ ವೀರಭದ್ರನಾಯಕ ? .... ನಿಮ್ಮ ಭಾವ, ಹತ್ತಿರದ ನಂಟು.’

ಸದಾಶಿವ :—ಹೌದು, ನೋಡಿ. ಅದಕ್ಕೇ ಅನ್ನೋದು ವಿಚಿತ್ರ ಅಂತ. ರಾಜ್ಯದ ಆಸೆ ಯಾರಿಗೆ ಉಂಟು, ಯಾರಿಗೆ ಇಲ್ಲ ? ಆದರೆ ಅದಕ್ಕೆ ನ್ಯಾಯ ನಂಟು ಗಣಿಸೋ ಕಾರಣಾನೂ ಇಲ್ಲ ?

ಅರಸು :—ಅದನ್ನ ಮರೆತಾಗಲೇ ನಾಯಕರೆ, ಮನುಷ್ಯ ಹಾಳಾಗೋದು !

ಸದಾಶಿವ :—ಸರಿ, ನಮ್ಮ ಮಾತು ವ್ಯರ್ಥ ಆಯಿತು. ಮೇಲೇರಿ ಬಂದ. ನಾವೂ ಯುದ್ಧಮಾಡಬಹುದಾಗಿತ್ತು. ನಿಮ್ಮ ನೆರವು ಜೇರೆ ಸಿಗುತಾ ಇದ್ದಿತು.... ಆದರೆ ಪಟ್ಟಕ್ಕೆ ಬಂದ ಹೊಸತು ; ಅನಸರ ಸಲ್ಲದು ಅಂತ ಹಿಂದೆ ನಿಂತೆವಿ. ಹಬ್ಬ ತಪ್ಪಿತು ಅಂತ ಹೋಳಿಗೆ

ತಪ್ಪಿತು ಅನ್ನಬಾರದು. ಅವನ ಕಣ್ಣಿಗೆ ಸಿಗದ ಹಾಗೆ ಮರೆಸಿ ಕೊಂಡೆವಿ.

ಅರಸು :—ಇದಾಗಿ ಏಳು ಎಂಟು ತಿಂಗಳು ಆಗಿರಬೇಕು–ಅಲ್ಲ ನಾಯಕರೆ?

ಸದಾಶಿವ:—ಸ್ವಲ್ಪ ಹೆಚ್ಚೇ ಇದ್ದರೂ ಇರಬಹುದು. ಇದು ಆಶ್ವಯುಜ. ಕಳೆದ ಪುಷ್ಯದಲ್ಲೇನೋ ನಾವು ತಪ್ಪಿಸಿಕೊಂಡೆವಿ. ಆಮೇಲೆ ಹಳ್ಳಿಪಳ್ಳಿ ಸೇರಿ ಪಡೆ ಕಟ್ಟಿದೆವಿ. ಸಮಯ ಬರೋತನಕ ಕಾದೆವಿ. ಇಕ್ಕೇರಿಯ ಪಡೆಯವರೂ ಕೆಲವರು ಸೇರಿದರು........ಈಗ ವೀರ ಭದ್ರನಾಯಕ ಹದಕ್ಕೆ ಬರುತಿದಾನೆ.

ಅರಸು :—ಆದರೂ ನಿಮ್ಮ ಧೈರ್ಯವೇ ಧೈರ್ಯ ಅನಬೇಕು, ನಾಯಕರೆ. ಇಷ್ಟು ಸ್ವಲ್ಪ ಪಡೆಯಲ್ಲಿ ಅವನನ್ನ ಹಣ್ಣುಗಾಯಿ–ನೀರುಗಾಯಿ ಮಾಡಿದಿರಲ್ಲ !

ಸದಾಶಿವ :—ಆssss....ಅದಕ್ಕೆ ಬೇರೆ ಕಾರಣಾನೂ ಉಂಟು. ಅವನ ಪಡೇಲಿ ಅರ್ಧ ಈಗ ಕೌಲೆದುರ್ಗದಲ್ಲಿ ಕಾವಲು ಇದೆ. ಅರ್ಧ ಬಿಜಾಪುರದ ಪಾತಶಹನ ಭಯಕ್ಕಾಗಿ ಎಲ್ಲೆಯಲ್ಲಿ ಇಟ್ಟಿದಾನೆ. ಈ ಸಮಯ ನೋಡಿ ಹೊಂಚಿಕೊಂಡೆವಿ, ಸುಲಭ ಆಗುತಾ ಇದೆ.

ಅರಸು :—ಅಲ್ಲಿನ ಇಚ್ಛೆ ಇರೋವಾಗ ಎಲ್ಲ ಹೂವಿನಸರ ಎತ್ತಿದಹಾಗೆ ಆಗುತದೆ ಕೆಲಸ ಅಂತಾರೆ, ನಾಯಕರೆ, ಹಿರೇರು. ಆ ಮಾತು ಸುಳ್ಳಲ್ಲ!

ಸದಾಶಿವ :—ಹ್ಣು! ಶಿವನ ಆಟ ಅನ್ನಿ. – ಈಗ ನಿಮ್ಮನ್ನ ಬಹಳ ಕಾಯಿ ಸೋದು ಒಳಿತಲ್ಲ. ನಮ್ಮ ನಿಯೋಗಿ ಸೂರಪ್ಪಯ್ಯನವರನ್ನ ಕರೆಸೋಣ. ಅವರೂ ಕೂಡಿ ಕಾಳೆಗದ ಕ್ರಮ ನಿರ್ಧರಿಸಬಹುದು, ಅಲ್ಲ ?

ಅರಸು :—ಆಗಲಿ ನಾಯಕರೆ.

ಸದಾಶಿವ :—ರಂಗಾ....

[ಹೆಜ್ಜೆಯ ಸದ್ದು ವೃದ್ಧಿಸುವುದು]

ರಂಗ :—ಒಡೇರೇ....

ಸದಾಶಿವ :—ಜೇಗ ಹೋಗಿ ನಮ್ಮ ಸೂರಪ್ಪಯ್ಯನವರನ್ನು ಗಾಡ ಬಂದು ಕಾಣಬೇಕಂತೆ ಅಂತ ತಿಳಿಸಿ ಕರೆದು ತಾ.

[ಹೆಜ್ಜೆಯ ಸದ್ದು ಕ್ಷಯಿಸುವುದು.]

[ರಂಗದ ಹೊರಗೆಂಬಂತೆ 'ಆsssss ಅ ಆ ಆ ಆssssss....' ಎಂಬ ಹಾಡಿನ ಆಲಾಪ]

ಸದಾಶಿವ :—ನೋಡಿ, ಅರಸರೆ, ನಮ್ಮ ಪಡೆಯ ಜನ—ಹೊಡಚಲು ತಾವ ಕೂತು ಸಂತೋಷದಿಂದ ಹಾಡುತಾ ಇದ್ದಾರೆ. ಹೀಗೆ ತಂಬು ಹೊಡೆದು ಯುದ್ಧಕ್ಕೆ ಅಂತ ಕುಂತಾಗ ಅವರ ಸುಖ ಕಾಣೋದೇ ನಮಗೆ ಹಬ್ಬ ಆಗುತದೆ.

ಅರಸು :—ನಿಜ, ನಾಯಕರೆ. ಮಕ್ಕಳ ಸುಖ ಅಲ್ಲದೆ ತಂದೆಯಾದವ ಇನ್ನೇನು ಬಯಸುತಾನೆ?

[ಆಲಾಪ ಕರಗಿ ಹಾಡುವಃಊಡುತ್ತದೆ. ಮೊದಲ ಮೂರು ಮತ್ತು ಐದನೆಯ ಸಾಲುಗಳನ್ನು ಒಬ್ಬ ಹಾಡುತ್ತಾನೆ. ನಾಲ್ಕನೆಯ ಮತ್ತು ಕೊನೆಯ ಸಾಲನ್ನು ಎಲ್ಲ ಒಟ್ಟಿಗೆ ಹಾಡುತ್ತಾರೆ :

ಹಾರಗುದುರೆ ಬೆನ್ನ ಏರಿಹೋಗುವ ನಮ್ಮ
ಸರದಾರ ನಡೆಯೋ ಬರುತೇವಿ
ಸರದಾರ ನಡೆಯೋ ಬರುತೇವಿ ಕಾಳೆಗಕೆ
ನೆರಳಿನ ಹಾಂಗೆ ನಿನ ಹಿಂದೆ
ನೆರಳಿನ ಹಾಗೆ ನಿನ ಹಿಂದೆ ಆಗಸರ
ಗರುವಕೆ ಮೆಯ್ಯ ಮುಡಿಪಿಟ್ಟು....

ಹಾಡು ಹಿನ್ನೆಲೆಗೆ ಸರಿಯುತ್ತಬರಲು, ರಂಗದತ್ತ ವೃದ್ಧಿಸುವ ಹೆಜ್ಜೆಯ ಸದ್ದು.]

ಸದಾಶಿವ :—ಬನ್ನಿ ಸೂರಪ್ಪಯ್ಯ. ಇವರು ಸೋದೆ ಸಂಸ್ಥಾನದ ಅರಸರು. ಸೋದೆ ಬಿಳಿಗಿಯವರು ಕೂಡಿ ಸಿರಿವಂತೆ ತಾವ ಬಂದು ಬೀಡು ಬಿಟ್ಟಿದಾರೆ. ಅರಸರು ಮುಂದಾಗಿ ಬಂದರು.

ಸೂರಪ್ಪಯ್ಯ :—ನಿಮ್ಮ ರಾಜ್ಯದ ಮನವಾರ್ತೆಯೆಲ್ಲ ಒಳಿತಲ್ಲ, ಅರಸರೆ?

ಅರಸು :—ಎಲ್ಲಾ ಒಳಿತು....ನಿಮ್ಮ ಹೆಸರು ಕೇಳಿದ್ದೆವಿ; ಈಗ ನೋಡಿ

ದೆವಿ. ನಾಯಕರು ಪಟ್ಟ ಏರಿ ನೀವು ನಿಯೋಗಿಗಳಾಗಿ ನಿಂತರೆ ಇಕ್ಕೇರಿ ಸಂಸ್ಥಾನ ಸುಖದ ತವುರು ಆಗೋದರಲ್ಲಿ ಸಂದೇಹವಿಲ್ಲ.

ಸದಾಶಿವ :—ಸೂರಪ್ಪಯ್ಯ, ಒಂದು ಯಾಮು ಕತ್ತಲು ಇರೋದಕ್ಕೆ ಮುಂದೆ ನಮ್ಮ ಪಡೆಯನ್ನ ಒಡೆದು ಸುತ್ತಣಿಂದ ಮುತ್ತಿ ಬರೋ ಅಂತೆ ಕಳಿಸಬೇಕು. ಆ ವೇಳೆಗೆ ಸೋದೆ–ಬಿಳಿಗಿ ಪಡೆಯುವರೂ ಬಂದು ಸೇರುತಾರೆ. ನಾಳೆ ಒಂದು ದಿನದಲ್ಲಿ, ಒಂದು ಪೆಟ್ಟಿಗೆ ಕಾಳಿಗ ಎರಡು ತುಂಡು ಆಗಬೇಕು.

ಸೂರಪ್ಪಯ್ಯ :—ಆಗಲಿ ನಾಯಕರೆ.

ಸದಾಶಿವ :—ಎಲ್ಲಕ್ಕಿಂತ ಹೆಚ್ಚಿನದು ಅಂದರೆ, ವೀರಭದ್ರನಾಯಕನನ್ನು ಕೈಸೆರೆ ಹಿಡಿಯೋದು–ಗೊತ್ತಲ್ಲ ?

ಸೂರಪ್ಪಯ್ಯ :—ಇಂದು ನಾವು ಯೋಚಿಸಿರೊ ಅಂತೇನೇ ಅದಕ್ಕೆ ಅಣಿ ಮಾಡಿದೇನೆ ನಾಯಕರೆ.

ಸದಾಶಿವ :—ಒಳ್ಳೇದು. ಇನ್ನು ನಮ್ಮ ಅರಸರನ್ನ ಬಿಡಾರದ ಮನೆಗೆ ಕೊಂಡುಹೋಗಿ.—ತಾವು ಇದು ತಮ್ಮದೇ ಬಿಡಾರ ಅಂತ ತಿಳಿಯಬೇಕು, ಅರಸರೆ. ಎಲ್ಲ ನೀವೇ ಹೇಳಿ ಮಾಡಿಸಿಕೊಬೇಕು.

ಅರಸು :—ಆಗಲಿ, ನಾಯಕರೆ. ಅದಕ್ಕೇನು ? ಹಾಗಾದರೆ ನಾವು ಹೊರಡುತೇವಿ.

ಸದಾಶಿವ :—ಒಳ್ಳೇದು, ಹೋಗಿಬನ್ನಿ. ಸೂರಪ್ಪಯ್ಯ, ಎರಡುಜಾವ ಮುಂದೆ ನಮ್ಮನ್ನ ನೋಡಬಹುದು.

ಸೂರಪ್ಪಯ್ಯ :—ಆಗಲಿ ನಾಯಕರೆ, ಬರುತ್ತೇವೆ.

ಅರಸು :—ಬರುತೇವೆ, ನಾಯಕರೆ.

ಸದಾಶಿವ :—ಒಳ್ಳೇದು.

[ಎರಡು ಹೆಜ್ಜೆಗಳು ಕ್ಷಯಿಸುವುವು. ಸದಾಶಿವನಾಯಕ ಮಂಚದಮೇಲೆ ಒರಗಿದ ಸದ್ದಾಗುತ್ತದೆ. ರಂಗದ ಹೊರಗಿನ ಸೈನಿಕರ ಗದ್ದಲ ಇ., ಹರಿದು ಬರುತ್ತದೆ. ಹಾಡು :

ಮೇಳ : ಹಿಂದೆ ನಿಂತೀಯಾಕೆ ಮುಂದೆ ಬಾ ನನ ಗೆಣೆಯ
ಕಣ ನಮಗೆ ತವುರು ಗಂಡೀಗೆ
ಕಣ ನಮಗೆ ತವುರು ಗಂಡೀಗೆ। ಗೆದ್ದಾರೆ
ಅರಸರುಂಬಳವ ಪಡೆದೇವು
ಅರಸರುಂಬಳವ ಪಡೆದೇವು। ಮಡಿದರೆ
ಶಿವನ ಸಿರಿಪಾದ ಸೇರ್‍ಯೇವು....

ಅಷ್ಟರಲ್ಲೆ, ನಾಟಕದ ಆರಂಭದಲ್ಲಿನಂತೆಯೇ ದೂರದ ಕೂಗು : 'ಕೂssssss ಹೂssssss ಹೂssssss.' ಹಾಡು ಗದ್ದಲ ನಿಲ್ಲುತ್ತದೆ. ಧ್ವನಿಗೆ ಮರದನಿ ಕೊಡುವ ಕೂಗು; ಅದಕ್ಕೆ ಉತ್ತರಿಸುವ ಕೂಗು—ಕೇಳುತ್ತದೆ. ರಂಗದ ಹೊರಗೆ ಗಜಿಬಿಜಿ ಸದ್ದು. ಕ್ಷಣಕಾಲದ ಆನಂತರ ಮತ್ತೆ ರಂಗವೇ ಸದ್ದಿನ ಕೇಂದ್ರವಾಗುತ್ತದೆ.]

ರಂಗ :—ಒಡೇರೇ!!!!

ಸದಾಶಿವ :—ಏನೋ ಅದು ?

ರಂಗ :—ಅವ್ವಾ ಅವರು ಬಂದಿದಾರೆ ಒಡೇರೇ!!

ಸದಾಶಿವ :—ಆ್ಞ ?!....ಅವ್ವ!!....ಗಾಡ ಕರೆದು ತಾ!!....

[ಹೆಜ್ಜೆ ಕ್ಷಯಿಸಿ ಕ್ಷಣತಡೆದು ಹೆಜ್ಜೆ ವೃದ್ಧಿಸುವುದು.]

ಸದಾಶಿವ :—ಅವ್ವಾ!!

ಹಿರಿಯವ್ವ :—ಶಿವೂ!....ನನ್ನ ಶಿವೂ!!....

ಸದಾಶಿವ :—ಅವ್ವ!!

ಹಿರಿಯವ್ವ:—ಎಷ್ಟು ದಿನ ಆಯಿತು ಶಿವೂ, ನಿನ್ನ ನೋಡದೆ!

ಸದಾಶಿವ:— ....ಈಗ ಬಂದೆ ಅವ್ವಾ ?....ಒಬ್ಬಳೆ ?....ಆ ನೀಚ ವೀರಭದ್ರ ನಾಯಕ ತೊಂದರೆ ಕೊಟ್ಟ ?....

ಹಿರಿಯವ್ವ:—ನಿನ್ನ ನೋಡಬೇಕು ಅನ್ನಿಸಿತು, ಶಿವೂ. ನೀನು ಇಕ್ಕೇರಿ ಮ್ಯಾಲೆ ಕಾಳೆಗಕ್ಕೆ ಬಂದೀಯೆ ಅಂತ ಕೇಳಿದಾಗಳಿಂದ ನಿನ್ನ ನೋಡಬೇಕು ಅಂತ ಆಸೆ ಆಗಿತ್ತು. ಆದರೆ, ಊರಿನೋರನ್ನ ಕೋಟೆ ಹೊರಗೆ ಬಿಡಬಾರದು ಅಂತ ನಾಯಕರ ಆಜ್ಞೆ....

ಸದಾಶಿವ:—ನೀಚ ನಾಯಕ!....ಆಜ್ಞೆ ಅಂತೆ ಅವನದು! ಹ್ಞ! ಮತ್ತೆಲ್ಲ ಒಳಿತಲ್ಲ ಅವ್ವ?....ನಿನ್ನ ಸೊಸೆ?....

ಹಿರಿಯವ್ವ:—ಶಿವನ ಕಾಪು.... – ಇವತ್ತು ಹೊತ್ತಾರೆ ನಾಯಕರ ತಾವ ಹೋಗಿ ಸೆರಗೊಡ್ಡಿ ಬೇಡಿದೆ: ನನ್ನ ಮಗನನ್ನ ನೋಡಬೇಕು ಅನ್ನಿಸುತದೆ, ಹೋಗುತೇನೆ, ಇದೊಂದು ನಡೆಸಿಕೊಡಿ—ಅಂತ. ಮೊದಲು ಒಪ್ಪಲಿಲ್ಲ.

ಸದಾಶಿವ:—ಯಾತಕ್ಕೆ ಒಪ್ಪುತಾನೆ ಅವನು !

ಹಿರಿಯವ್ವ:—ನಿಮ್ಮ ಮಗ ನಿಮ್ಮನ್ನ ನೆನೆಸಿಕೋತಾನೆ ಅಂಬೋ ಭ್ರಾಂತು ಬೇಡ, ಹುಟ್ಟಿದ ಊರನ್ನೆ ಮರೆತು ಹಾಳುಮಾಡಬಂದವ ! – ಅಂದರು. ನಾನು ಮತ್ತೆ ಮತ್ತೆ ಬೇಡಿಕೊಂಡೆ....

ಸದಾಶಿವ:—ಆ ಅಲ್ಪನ ತಾವ ನೀನು ಬೇಡೋದೇನವ್ವ?

ಹಿರಿಯವ್ವ:—ನನ್ನ ಸೊಸೆ ಕೂಡಾ ಹೋಗೋದು ಬ್ಯಾಡ ಅಂದಳು.

ಸದಾಶಿವ:—(ಮೃದುವಾದ ಕೊಂಕು ನಗು) ಕೊಟ್ಟದ್ದು ನಮಗೆ ಆದರೂ ಹುಟ್ಟಿದ್ದು ಅದೇ ರಕ್ತ, ಅಲ್ಲ ಅವ್ವಾ?

ಹಿರಿಯವ್ವ:—ಆದರೂ ಪೂರಾ ಒಲ್ಲೆ ಅನಲಿಲ್ಲ ನಾಯಕರು. 'ಮಗನ ತಾವ ಹೋಗಬೇಕು ಅಂದರೆ ಒಲ್ಲೆ ಅನಲಾರೆ. ಅದೂ, ಅತ್ತೆವ್ವ, ನಿಮಗೆ ಯಾಕೆ ಒಲ್ಲೆ ಅನ್ನಲಿ? ಅದೇನೋ ಒಳಿತಲ್ಲ ಅನ್ನಿಸಿತು ನನಗೆ, ಹಂಬಲ ಆದರೆ ಹೋಗಿಬನ್ನಿ' ಅಂದರು. ಈವೊತ್ತು ಹೊತ್ತು ಕಂತಿದಮೇಲೆ ಕೋಟೆ ದಾಟಿಸಿ ಈ ಬೆಟ್ಟದ ಬುಡದ ತನಕ ಕಳುಹಿಸಿ ಬಾ ಅಂತ ಆಳು ಕಳುಹಿದರು.

ಸದಾಶಿವ:—ನೀನು ಬಂದದ್ದು ಒಳಿತಾಯಿತವ್ವ. ನನಗೆ ನಿನ್ನದೇ ಹಂಬಲ. ದಿನವೂ ನೆನೆಸಿಕೋತಾ ಇದ್ದೆ. ಇನ್ನು ನೀನು ಬಂದಮೇಲೆ ನನಗೆ ಧೈರ್ಯ .... ನಾಳೆ ಕಾಳೆಗಕ್ಕೆ ಎಲ್ಲಾ ಅಣಿ ಆಗಿದೆ. ಸೋದೆ–ಬಿಳಿಗಿ ಅರಸರೂ ಪಡೆಕೂಡಿ ಬಂದಿದಾರೆ. ನಾಳೆ ಒಂದು ದಿನ, ಅಂದರೆ ಮುಗೀತು ಇಕ್ಕೇರಿ ಕೋಟೆ!

ಹಿರಿಯವ್ವ:—ನೀನು ಹುಟ್ಟಿ ಬೆಳೆದ ತೊಟ್ಟಿಲು, ಶಿವಾ, ಇಕ್ಕೇರಿ. ಅಲ್ಲಿ ಹಾಲು ಉಂಡು ನೀನು ದೊಡ್ಡವ ಆಗಿದೀಯೆ.

ಸದಾಶಿವ:—ಹೌದವ್ವ. ನಿನ್ನ ಮಗ ಅದನ್ನ ಮರೆತಿದಾನೆ ಅಂತ ತಿಳೀಬೇಡ. ಆದರ ನೆನಪು ಇರದೆ ಇರೋದಾಗಿದ್ದರೆ ನಿನ್ನ ಮಗ ಯಾರ ಕಾಲ

ಕಸವಾಗುತಾ ಇದ್ದ. ನಾನು ಹುಟ್ಟಿದಾಗ, ಮೊದಲು, ಈ ಜಗತ್ತಿನ ಆಶ್ಚರ್ಯ ಅಲ್ಲಿ ಕಂಡಿದೇನೆ.

ಹಿರಿಯವ್ವ:—ಈ ಹಾಲುನೆನಪು ಆದರ ಮ್ಯಾಲೆ ಕತ್ತಿ ಎತ್ತುತಾ ಇರೋ ನಿನ್ನ ಕೈಯ್ಯನ್ನ ತಡೆಯೋದಿಲ್ಲ, ಶಿವಾ?

ಸದಾಶಿವ:—ಆ ಹಾಲುನೆನಪೇ ನನಗೆ ಈಗ ಕೈಯಲ್ಲಿ ಕತ್ತಿ ಎತ್ತೋ ಸತ್ತ್ವ ಕೊಟ್ಟಿದೆ, ಅವ್ವಾ! ಹುಟ್ಟಿದ ಮೊದಲು ಯಾವ ನೆಲ ನನ್ನನ್ನು ಬೆರಗುಮಾಡಿತೋ ಆ ನೆಲ, ಈಗ ನನ್ನ ಕಂಡು ಬಿಲ್ಲು ಬೆರಗಾಗ ಬೇಕು—ಹಾಗೆ ಮಾಡೋದು ನನ್ನ ಹಂಬಲ!

ಹಿರಿಯವ್ವ:—ಅಲ್ಲಿನ ಒಂದೊಂದು ಕಲ್ಲೂ ನಿನ್ನನ್ನ ನೆನೆಸಿಕೋತದೆ. ನೀನು ಒಳ್ಳೆಯವನಾಗಲಿ, ನಿನ್ನಿಂದ ಊರು ಬಂಗಾರವಾಗಲಿ ಅಂತ ಬಯಸುತಾ ಇದೆ.

ಸದಾಶಿವ:—ಕಲ್ಲು, ತಾನೇ ಏನು ನೆನಸಿಕೋತದೆ ಬಿಡವ್ವಾ! ಮನುಷ್ಯ ಅದು ತನ್ನನ್ನ ನೆನಸಿಕೋಹಾಗೆ ಮಾಡಬೇಕು; ನೆನಸಿಕೊಂಡು ಹಾಡಿ ಹೊಗಳೋ ಹಾಗೆ ಮಾಡಬೇಕು, ತನ್ನ ನೆತ್ತರಿನಿಂದ ಅದನ್ನ ನೆನೆಸಿ! ಕಲ್ಲು ಅಲ್ಲ, ಬೆಟ್ಟ ಬೆಟ್ಟಗಳು ಹಾಡಬೇಕು ನನ್ನ ಪೌರುಷಾನ—ಹಾಗೆ ಮಾಡುತೇನೆ!

ಹಿರಿಯವ್ವ:—ಮಗಾ, ಇಕ್ಕೇರಿ ಜನಗಳನ್ನೂ ಮರೆತುಬಿಟ್ಟೆಯಾ? ನಿನ್ನ ಹಿರೇರು, ಗುರುಗಳು, ನಂಟು, ಕೆಳೆ—ಎಲ್ಲಾ ನೀನು ಒಳ್ಳೇವ ನಾಗಲಿ ಅಂತ ಹಂಬಲಿಸುತಾ ಇದಾರೆ. ಊರಿನವರ ಮೇಲೆ ಕತ್ತಿಹಿರಿದು, ನಿನಗೆ ಒಳಿತಾಗಲಿ ಅನ್ನೋರನ್ನ ಕೊಲ್ಲುತೀಯಾ, ಶಿವಾ?

ಸದಾಶಿವ:—ಜನಗಳನ್ನ ಮರೆತಿಲ್ಲ, ಅವ್ವಾ. ಯಾರು ಸತ್ತು ನನಗೆ ಒಳಿತು ಮಾಡಲಿ ಅನ್ನೋದಿಲ್ಲ. ನನ್ನ ಒಳಿತು ನನ್ನ ಹಂಬಲ. ಮಧ್ಯೆ ಅನಿವಾರ್ಯವಾಗಿ ಯಾರಿಗೊ ಆಪತ್ತು ಬರುತದೆ ಅಂತ, ಕೆಡುಕು ತಂದು ನನ್ನ ತಲೇಮೇಲೆ ಹೊತ್ತುಕೊಳ್ಳೋದೆ ಅವ್ವಾ? .... ನನಗೂ ಗೊತ್ತು: ಒಬ್ಬನ ಕೀರ್ತಿ ನೂರುಕಾಲ ಬಾಳೋದಾದರೆ ಅದು ಜನಗಳ ಬಾಯಿಯಲ್ಲಿ!—ಎಲ್ಲರೂ ನನ್ನ ಶಕ್ತಿ ಕಂಡು

ಬೆರಗಾಗಿ ಹೋಗಬೇಕು. ಒಬ್ಬೊಬ್ಬರೂ ನನ್ನ ಕಥೇನ ತಮ್ಮ ಮಕ್ಕಳಿಗೆ, ಅವರು ತಮ್ಮ ಮಕ್ಕಳಿಗೆ ಹೇಳುತಾ ಹೋಗಬೇಕು!

ಹಿರಿಯವ್ವ:—ಮಗಾ, ಈ ಕಾಳಿಗದ ಗೊಂದಲ ಇಲ್ಲದಿದ್ದರೆ, ಈಗ ಇಕ್ಕೇರಿ ಸಂಸ್ಥಾನ ಇಡೀ ಆನಂದದಿಂದ ಕುಲುಕುಲು ನಗುತಾ ಇರುತಿತ್ತು. ನವರಾತ್ರಿ ಉತ್ಸವ ನಡೀಬೇಕಾದ ಕಾಲ. ಸಂಸ್ಥಾನದವರೆಲ್ಲ ನಗರದಲ್ಲಿ ಜಾತ್ರೆ ಸೇರೋ ಕಾಲ. ಇಂಥಾ ದೊಡ್ಡ ಹಬ್ಬದಲ್ಲಿ, ಅವ್ವಂದಿರು ಅಳುತಾ ಇರೋದು ಮಕ್ಕಳು ಕಿರಚುತಾ ಇರೋದು ದೊಡ್ಡೋರು ಅಯ್ಯೋ ಅನ್ನೋದು ನಿನಗೆ ಸಹಿಸುತದೆಯೆ?

ಸದಾಶಿವ:—ಅದೆಲ್ಲ ಅನಿವಾರ್ಯ, ಅವ್ವಾ....ಇನ್ನೇನು ನಾಳೆ ಹೊತ್ತಿಗೆ ಇಕ್ಕೇರಿ ನಮ್ಮ ವಶ ಆಗುತದೆ. ವಿಜಯದಶಮಿ ದಿನಕ್ಕೆ ನಮ್ಮ ಜನ ಪಟ್ಟ ಪಾಡೆಲ್ಲ ಮರೆತು ನಲಿಯೋ ಹಾಗೆ ಮಾಡುತೇನೆ.

ಹಿರಿಯವ್ವ:—ಅಷ್ಟು ಸುಲಭ ಆಗಿ ಮರೆಯೋದು ಅಲ್ಲ ಆ ಪಾಡು. ಹಬ್ಬ ಬಂದಿತು ಅಂತ, ಅವ್ವಂದಿರಿಗೆ ಸತ್ತ ಮಕ್ಕಳು ಹಿಂದಿರುಗುತಾರೆ? ಎಂಥ ಹಬ್ಬ ನಡೆಸಿದರೂ ಅದು ಅವರಿಗೆ ಶ್ಮಶಾನದಾಗೆ ಚಪ್ಪರ ಹಾಕಿ ವಾಲಗ ಊದಿದ ಹಾಗೆ ಆಗುತದೆ....ಒಬ್ಬೊಬ್ಬರ ಅಳಲೂ ಎಷ್ಟು ಅಂತ ನಾನು ಕಣ್ಣಾರೆ ಕಂಡಿದೇನೆ. ಮೊನ್ನೆ ರಾತ್ರಿ ಅಘೋರೇಶ್ವರನ ದರ್ಶನಕ್ಕೆ ಅಂತ ಹೋಗುತಾ ಇದ್ದೆ. ಆಗ ಕಂಡ ಒಂದೊಂದು ನೋಟ ನೆನೆಸಿಕೊಂಡರೆ ಜೀವ ಝಲ್ ಅನ್ನುತದೆ....

ಸದಾಶಿವ:—ಕಾಳಿಗ ಅಂದರೆ ಅವೆಲ್ಲಾ ಸಹಜ, ಅವ್ವಾ. ಹೆಣ್ಣೆದೆ ಅದಕ್ಕೆ ಕರಗಿ ನೀರಾಗೋದೂ ಸಹಜ.

ಹಿರಿಯವ್ವ:—ಹೆಣ್ಣು ಎದೆ ಅಂತಲ್ಲ, ಶಿವಾ, ಗಂಡಿನ ಗುಂಡಿಗೇನೂ ತಲ್ಲಣಿಸಿ ಹೋಗಬೇಕು—ಅಂಥಾ ನೋಟ! .... ಒಂದು ಮುದುಕಿ ಅಕ್ಕು – ಸುಕ್ಕುಮೈಯ್ಯಿ, ಕೆರೆ ಏರಿ ಮ್ಯಾಲೆ ಕುಂತು ಕಾಳಿಗದಲ್ಲಿ ಸತ್ತ ಮಗನನ್ನ ಅವಚಿಕೊಂಡು ಗೋಳೋ ಅಂತ ಅಳುತಿದ್ದಳು.... ಅಯ್ಯೋ, ಅದನ್ನ ಏನು ಅಂತ ಹೇಳಲಿ!....ಕಲ್ಲು ನೀರಾಗೋ ಹಾಗೆ ಅವಳು ಅಳುತಾ ಇದ್ದುದು ಇನ್ನೂ ನನ್ನ ಕಿವೀಲಿ ಹುಯ್ಯ

ಲಿಡುತಾ ಇದೆ .... ಅಂಥಾ ಗೋಳು ಲೋಕದಮ್ಯಾಲೆ ಯಾರು ಯಾರಿಗೂ ಬ್ಯಾಡ ಶಿವಾ !

ಸದಾಶಿವ:—ಪಾಪ! ಎಷ್ಟಾದರೂ ಹೆತ್ತ ಕರುಳು ಅಲ್ಲ ಅವ್ವಾ?

ಹಿರಿಯವ್ವ:—ಆ ಅಘೋರೇಶ್ವರನ ಗುಡಿ ಕಟ್ಟಿಮ್ಯಾಲೆ ಇನ್ನೊಂದು ಹೆಣ! .... ಅವನ ಹೆಂಡತಿ–ಇನ್ನೂ ಹರೆಯ, ಪಾಪ–ಗುಡಿ ನೊರೆಯೋ ಹಾಗೆ ಅಳುತಾ ಇದ್ದಳು. ಬದೀಲಿ ಒಂದು ಮಗು; ಇನ್ನೂ ಐದೋ ಆರೋ ವರ್ಷದ್ದು. ಅದಕ್ಕೆ ಏನು ಅಂತಲೂ ತಿಳೀದು. ಸುಮ್ಮನೆ ಅಳುತಾ ಇದೆ....ನೆಲ ನೆಲ ತಟ್ಟಿ ಶಾಪ ಹಾಕುತಾ ಇದ್ದಳು! .... 'ಯಾ ತಾಯಿ ಹಡೆದಳವ್ವಾ ಈ ನೆತ್ತರು ಪಿಶಾಚೀನ....ಯಾರ ತಾಳಿ ಹರಿಯೋ ಈ ಭೂತಾನಾ!' ಅಂತ .... ಅದನ್ನ ಕೇಳಿ ಈ ತಾಯಿ ಕರುಳಿಗೆ ಏನು ಆದೀತು....

ಸದಾಶಿವ:—ಅದಕ್ಕೆಲ್ಲ ನೀನು ಇಷ್ಟು ಯೋಚಿಸುತೀಯೆ ಅಂತ ನಾನು ನಾನು ತಿಳಿದಿರಲಿಲ್ಲ ಅವ್ವಾ. ನಿನ್ನ ಮಗ ವೀರನಾಗಿ ಬಾಳ ಬೇಕು, ಅರಸಾಗಿ ಮೆರೀಬೇಕು – ಅಂತ ನಿನಗೂ ಆಸೆ ಇದೆ ಅಂದುಕೊಂಡಿದ್ದೆ.

ಹಿರಿಯವ್ವ:—ಶಿವಾ ನೀನು ಅರಸಾಗಿ ಓಲಗಿಸೋದು ನನಗೆ ಕಹಿ ಅಂತ ತಿಳೀಬ್ಯಾಡ. ಮಗ ಊರ್ಜಿತ ಆಗೋದಲ್ಲದೆ ತಾಯಿಜೀವ ಇನ್ನೇನು ಬಯಸುತದೆ? ಇಷ್ಟಾಗಿ ಗುಡೀಗೆ ಹೋಗುತೇನೆ, ಬಸವಣ್ಣನ ಕಣ್ಣು ಕತ್ತಲೇಲಿ ಹೊಳೀತಾ ಇದೆ; ನೆತ್ತರು ಒಂದೇಸಮ ಕಣ್ಣಿನಿಂದ ಸುರೀತಾ ಇದೆ....

ಸದಾಶಿವ:—ಇದಕ್ಕೆ ನಾನು ಏನು ಹೇಳಲಿ, ಅವ್ವಾ!

ಹಿರಿಯವ್ವ:—ಎದೆ ಬಡಿದುಕೋತಾ ಇತ್ತು. ಅಘೋರೇಶ್ವರನ ಗುಡಿ ಒಳಗೆ ಹೋಗಿ ಪೂಜೆ ಸಲ್ಲಿಸಿ ತೀರ್ಥಪ್ರಸಾದಕ್ಕೆ ಕೈ ಒಡ್ಡುತೇನೆ– ಪೂಜಾರಿಮ್ಯಾಲೆ ಈಶ್ವರ ಬಂದು ಅಪ್ಪಣೆಕೊಡಿಸುತಿದಾನೆ: ಈ ಕಾಳೆಗದಿಂದ ಊರು ಹಾಳಾಗುತದೆ; ಅದನ್ನ ತಡೆಯದೆ ಇದ್ದರೆ ಇಕ್ಕೇರಿ ಪಾಳೆಯಗಾರರ ಕುಲ ನಿರ್ನಾಮ ಆಗುತದೆ–ಅಂತ.

ಸದಾಶಿವ:—ನನಗೂ ಅರ್ಥ ಆಗುತದೆ ಅವ್ವ, ಆದರೆ ....

ಹಿರಿಯವ್ವ—ತೀರ್ಥ ಪ್ರಸಾದ ಪಡೆದು ಮನೆಗೆ ಬಂದು ಮಲಗಿದರೆ ಕನಸಿನಲ್ಲಿ ಈಶ್ವರ ಕಾಣಿಸಿಕೊಂಡು ಅದನ್ನೇ ಹೇಳುತಾನೆ.... ಅಯ್ಯೋ, ತಾಯಿ ಕರುಳು ಕೇಳಬಾರದ ಕೇಳಲಾಗದ ಮಾತು ಅವು ! .... ಮಗಾ, ಇಷ್ಟೂ ಆಗಿ ಶಿವನ ಇಚ್ಛೆಗೆ ಎದುರು ನಡೆದೆವು ಅಂದರೆ ಅವನ ಕೋಪ ನಮ್ಮನ್ನ ಉರಿಸದೆ ಬಿಡುತದೆಯೆ ?

ಸದಾಶಿವ :—ಅವ್ವಾ, ಇನ್ನೇನು ನಾಳೆ ವೀರಭದ್ರನಾಯಕ ಸೋಲುತಾನೆ, ಸೋದೆ–ಬಿಳಿಗಿಯವರ ಪಡೆ ಬೇರೆ ಬಂದು ಕೂಡಿದೆ. ನಾಳೆ ಕಳೀತಂದ್ರೆ ನಾನೇ, ನಿನ್ನ ಮಗನೇ—ನಿನ್ನ ದಯದಿಂದ ಇಕ್ಕೇರಿ ಸಂಸ್ಥಾನದ ಅರಸು ಆಗುತಾನೆ. ಹೆತ್ತ ಕರುಳು ಮಗನ ಒಳಿತಿಗೆ ಒಲ್ಲೆ ಅನ್ನುತದೆ ಅಂತ ನಾ ತಿಳಿದಿಲ್ಲ .... ಹತ್ತು ಕಳೆದದ್ದಿ ಉಂಟು, ಹನ್ನೊಂದು ಬ್ಯಾಡ ಅಂದರೆ ಸಮವಾಗುತದೆಯೆ, ಅವ್ವ ? ಇಷ್ಟು ದಿನದಲ್ಲೆ ಎಷ್ಟೋ ಜನ ಸತ್ತಿದಾರೆ, ಎಷ್ಟೋ ಜನ ನರಳಿದಾರೆ .... ನಾಳೆ ಒಂದು ದಿನ ಕಳೀತಂದ್ರೆ ಈ ಪಾಪಕ್ಕೆಲ್ಲ ಪ್ರಾಯಶ್ಚಿತ್ತ ಮಾಡಿಕೊಂಡು ಶಿವನಿಗೆ ತಪ್ಪುದಂಡ ಒಪ್ಪಿಸುತೇನೆ. ಅಘೋರೇಶ್ವರನ ಗುಡಿಗೆ ಚಿನ್ನದ ಕಳಶ ಇಡಿಸುತೇನೆ. ಈಗ ಮಾತ್ರ ನೀನು ಒಲ್ಲೆ ಅನಬಾರದು.

ಹಿರಿಯವ್ವ:—ಹ್ಞು.... ಇನ್ನು ಏನು ಹೇಳಲಿ ಶಿವಾ ?....ನನ್ನ ಗಂಟಲು ಕಟ್ಟುತಾ ಇದೆ. ಶಿವ ನಿನಗೆ ಹೇಗೆ ಇಚ್ಛೆ ಕೊಡುತಾನೆ ಹಂಗೆ ಮಾಡಪ್ಪ.

ಸದಾಶಿವ:—ಅವ್ವ, ನಿನಗೆ ಎದುರುಮಾತಾಡಿದೆ ಅಂತ ಬ್ಯಾಸರ ಬೇಡ. ನಿನ್ನ ಹರಕೆ ಇಲ್ಲದೆ ನಾನು ಏನು ಮಾಡಿಯೇನು ? ನಾನು ಶಿವನ ಬೇಡದೆ ಬದುಕಿಯೇನು, ಅವ್ವಾ, ನಿನ್ನ ಬೇಡದೆ ಬದುಕಲಾರೆ.... ಒಳ್ಳೇದು, ಈಗ ಚಣದಲ್ಲಿ ಬರುತೇನವ್ವ. ಆಳುಗಳ ತಾವ ಕಾರ್ಯ ಇದೆ. ಹಾಗೇ ನಿನಗೆ ಫಲಾಹಾರಕ್ಕೆ ಹೇಳಿ ಬರುತೇನೆ.

ಹಿರಿಯವ್ವ:—ಫಳಾರ ಬ್ಯಾಡ, ಮಗಾ. ಅಲ್ಲದೆ ಇವೊತ್ತು ಶುಕ್ರವಾರ. ಸ್ವಲ್ಪ ಹಾಲು ತರೋದಕ್ಕೆ ಹೇಳಿದರೆ ಸಾಲುತದೆ.

ಸದಾಶಿವ:—ಆಗಲವ್ವ, ಬರುತೇನೆ ಈಗ.

[ಹೆಜ್ಜೆ ಕ್ಷಯಿಸುವುದು ; ತುಸು ಹೊತ್ತು ಕಳೆಯಲು :]

ಹಿರಿಯವ್ವ:—ಅಘೋರೇಶ್ವರ, ಯಾವ ಬಾಯಿಂದ ಅಪ್ಪಣೆಕೊಡಿಸಿದೆ ಯಪ್ಪಾ ಅದನ್ನ! .... ಹ್ಯಾಂಗೆ ಸಲ್ಲಿಸಲಿ ದೇವಾ .... ಅಂಥಾ ಕ್ರೂರವಾದ ಆಜ್ಞೆ! .... ಹೆಣ್ಣು ಕರುಳು ಅರಿತಿಲ್ಲ ಸ್ವಾಮಿ .... ಆಗಲಿ, ಎಲ್ಲಾ ನಿನ್ನ ಇಚ್ಛೆ! .... ಕರಗುತಾ ಇರೋ ನನ್ನ ಎದೇನ ಕಲ್ಲುಮಾಡಿ ಆದರೂ ನಿನ್ನ ಆಜ್ಞೆ ನಡೆಸಿಕೋ, ಸ್ವಾಮಿ.

ಒಬ್ಬ (ಎತ್ತರದ ಕಂಠದಲ್ಲಿ ಹೆಂಗಸಿನ ಧ್ವನಿಯನ್ನನುಕರಿಸಿ) :

ಕಾಳೆಗದ ಕಣದಾಗೆ ಕತ್ತಿ ಹಿರಿವಣ್ಣಯ್ಯ
ಕೊಲೆಯಾಕೊ ಮಾರಿ ಬಲಿಯಾಕೋ........

**ಅರ್ಧಮೇಳ** (ಉತ್ತರವೆಂಬತೆ) :

ಕತ್ತಿಯ ಕಂಡರೆ ಹತ್ತುಮಾರೋಡೋಳೆ
ನೆತ್ತರ ರುಚಿಯ ಬಲ್ಲೆಯೇನೆ
ನೆತ್ತರ ರುಚಿಯ ಬಲ್ಲೇನೆ ತಂಗೆವ್ವ
ಕತ್ತಿಯೊಲವಾಟ ಗೊತ್ತೇನೆ

ಒಬ್ಬ (ಹಿಂದಿನಂತೆಯೇ) :

ನೆತ್ತರ ಕಾಳೆಗದ ಬಿತ್ತ ತಂದವರ್ಯಾರೋ
ಬಿತ್ತಿದವರ್ಯಾರೊ ನೆಲದಾಗೆ

**ಅರ್ಧಮೇಳ :**

ಭತ್ತವ ಬಿತ್ತಿದರೆ ಭತ್ತವ ಬೆಳೆದಾರು
ನೆತ್ತರ ಬೆಳೆದಾರು ನೆತ್ತರಿಗೆ
ನೆತ್ತರ ಬೆಳೆದಾರು ನೆತ್ತರಿಗೆ ಅದರ ರುಚಿ
ಭತ್ತದ ಸವಿಗೂ ಮಿಗಿಲವ್ವ........

ಹಾಡು ಕರಗುತ್ತ ಬಂದು ಗಾಳಿಯಲ್ಲಿ ಲೀನವಾಗುವುದು. ಕೇಳುತ್ತಿದ್ದಂತೆ ಉದ್ವಕ್ಕೂ ಹಿರಿಯವ್ವ ಗಂಟಲು ಕಟ್ಟಿ ಬಿಕ್ಕುತ್ತಿರುವುದು ಕೇಳಿಸುತ್ತಿರುತ್ತದೆ.]

ಹಿರಿಯವ್ವ :—(ಬಿಕ್ಕುತ್ತ).....ಹೌದು!......ಹೌದು!......ಹೆಣ್ಣು ಜೀವಾ ಬಡುಕೋತಾ ಇರುತದೆ....ಗಂಡು, ಬಲಿ ನಡೆಸುತಾ ಇರುತದೆ.... ಶಿವನೇ, ಈ ರಣಗುಣಿತ ಎಷ್ಟುದಿನ?....ಎಷ್ಟುದಿನಾ, ಸ್ವಾಮಿ, ಎಷ್ಟುದಿನ??....ಇದಕ್ಕೆ ಕೊನೇನೇಇಲ್ಲ, ಸ್ವಾಮಿ?....ಈ ಬೆಂಕಿ ನೆಲದಲ್ಲಿ ಹೆಣ್ಣುಗಳನ್ನ ಹುಟ್ಟಿಸಿ ಯಾಕೆ ಹಿಸಗುತೀಯೆ, ಪ್ರಭು? ....ಇದೂ ನಿನ್ನ ಲೀಲೇನಾ, ಶಿವಾ?

[ಹೆಜ್ಜೆಯ ಸದ್ದು ವೃದ್ಧಿಸಲು]

ಹಿರಿಯವ್ವ :—(ಅಳುತಡೆದು) ಶಿವೂ!

ಸದಾಶಿವ :—ಯಾಕೆ ತುಂಬಾ ಖಿನ್ನಳಾಗಿದ್ದೀ ಅವ್ವಾ?....ನೀನು ಹೀಂಗೆ ನೋಯುತಾ ಇದ್ದರೆ ನನಗೆ ಜಯ ಸಿಕ್ಕುತದೆಯಾ ಅವ್ವಾ.... ನೀನು ಕಣ್ಣೊರಿಸಿಕೊಂಡು, ಮಗನ ತಪ್ಪಿದ್ದರೂ ಉಡಿಯಲ್ಲಿ ಹಾಕಿಕೊಂಡು ಮನ್ನಿಸಿ ಹರಸಬೇಕವ್ವಾ. ನಿನ್ನ ಸಂಕಟಕಂಡು ನನಗೂ ಸಂಕಟ ಆಗುತದೆ....ನೀನು ಒರೋ ಮುನ್ನ ನನ್ನ ಆನಂದದಲ್ಲಿ ಒಂದು ಅರಕೆ ಉಳಿದಿತ್ತು. ನೀನು ಬಂದಾಗ ಅದೂ ತುಂಬಿತವ್ವಾ....

ಹಿರಿಯವ್ವ—ಎದೆ ಉಮ್ಮಳ ಉಕ್ಕಿಬರುತಾ ಇದೆ, ಮಗಾ....ನಿನಗಲ್ಲದೆ ನಾನು ಯಾರಿಗೆ ಜಯ ಆಗಲಿ ಅನ್ನಬೇಕು? ನಿನಗಲ್ಲದೆ ಇನ್ನು ಯಾರ ಒಳಿತಿಗೆ ನಾನು ಹಂಬಲಿಸಬೇಕು?....ಆದರೆ, ಶಿವಾ, ನನಗನ್ನಿಸುತ್ತದೆ—ತಾಯಿ ಎದೆಯನ್ನು ಬೆಣ್ಣೆಯಿಂದ ಮಾಡಿದವ ಅದು ತಡೆದುಕೊಳ್ಳಲಾರದ ವಿವೇಕದ ಬೆಂಕಿಯನ್ನ ಬದಿಯಲ್ಲೇ ಉರಿಸಬಾರದಿತ್ತು, ಅಂತ....ಕರುಳು ಮರುಗುತಿರೋವಾಗ ಬುದ್ಧಿ ಮ್ಯಾಲೆ ಎರಗುತದೆ....

ಸದಾಶಿವ :—ಹೌದವ್ವಾ. ನಮ್ಮ ಶಾಸ್ತ್ರಿಗಳು ಯಾವಾಗಲೂ ಹೇಳುತಿದ್ದರು— ನನಗೆ ನೆನಪಿಗೆ ಬರುತ್ತದೆ—:ಗಂಡು, ಕರುಳು ತುಳಿದು ವಿವೇಕದ ಮಹಲು ಕಟ್ಟುತ್ತದೆ; ಹೆಣ್ಣು, ಬುದ್ಧಿ ಮೆಟ್ಟಿ ಒಲವಿನ ಗುಡಿ ಕಟ್ಟುತದೆ. ಮಹಲು ಮನುಷ್ಯನಿಗೆ ಸುಖಕೊಟ್ಟು ಕೊಲ್ಲು

ತದೆ, ಗುಡಿ ಕೊಂದರೂ ಸುಖ ಕೊಡುತದೆ. ಅದಕ್ಕೇ ಗಂಡು ನೆಲದಮೇಲೇ ಉಳಿತಾನೆ, ಹೆಣ್ಣು ಮುಗಿಲಿಗೇರುತಾಳೆ.

ಹಿರಿಯವ್ವ:—ನೆನಪಿದೆ ಅಲ್ಲಾ ಮಗ?....ನಿಜ, ಹೆಣ್ಣು ಒಲವಿನ ಗುಡಿ ಕಟ್ಟುತಾಳೆ. ಆದರೂ ಆ ಗುಡಿ ಕಲ್ಲಿನದೇ ಆಗಿರುತದೆ....ಆಗಲಿ, ಮಗಾ. ಶಿವ ನಿನಗೆ ಒಳಿತು ಮಾಡಲಿ.

ಸದಾಶಿವ:—ಅವ್ವಾ, ಇನ್ನು ನಾನು ಗೆದ್ದೆ! ತಾಯಿ ಹರಕೆ ಶಿವನ ಹರಕೆಗಿಂತ ಮೇಲು!....ಇನ್ನು ಅವ್ವಾ, ನನಗೆ ನಿಶ್ಚಿಂತೆ!

[ಹೆಜ್ಜೆಯ ಸದ್ದು ವೃದ್ಧಿಸುವುದು]

ರಂಗ:—ಒಡೇರೇ....

ಸದಾಶಿವ:—ಹಾಲು ತಂದೆಯಾ, ರಂಗ?....ಇಲ್ಲಿರಿಸಿ ಹೋಗು.

[ಹೆಜ್ಜೆ ಕ್ಷಯಿಸುವುದು]

ಹಿರಿಯವ್ವ:—....ಮಗಾ, ನಾನು ಬರೋ ಮುಂದೆ ನಮ್ಮ ಜೋಯಿಸರ ತಾವ ಹೋಗಿದ್ದೆ. ಅವರು ನಿನಗೆ ಒಳ್ಳೇದಾಗಲಿ ಅಂತ (ವಿಚಿತ್ರ ಸ್ವರದಲ್ಲಿ) ಶಿವನ ಪ್ರಸಾದದ ವಿಭೂತಿ ಕೊಟ್ಟಿದ್ದಾರೆ....ಎಲ್ಲಿ, ಹಣೆಗಿಡುತೇನೆ....

ಸದಾಶಿವ:—ಶಿವನ ಪ್ರಸಾದ ಅಲ್ಲ ಅವ್ವಾ ಇದು, ನಿನ್ನ ಪ್ರಸಾದ!

ಹಿರಿಯವ್ವ:—(ಗಂಟಲು ಕಟ್ಟಿದರೂ ಅದನ್ನು ಮರೆಸಲೆತ್ನಿಸುತ್ತ) ಇದನ್ನ ಸ್ವಲ್ಪ....ಹಾಲಿಗೆ ಹಾಕಿ ಕುಡಿಯಬೇಕಂತೆ....ನಿಲ್ಲು, ಹಾಲಿಗೆ ಹಾಕಿ ಕೊಡುತೇನೆ........ಹ್ನು, ತಗೋ....ಆ್ಹ, ನಿಲ್ಲು. ನಾನೇ ಕುಡಿಸುತೇನೆ....

[ಹಾಲು ಕುಡಿಸಿದ ಸದ್ದು—ಕ್ಷಣಕಾಲ ನೀರವ]

ಸದಾಶಿವ:—....ಏನೋ ವಶೀಕರಣ, ಅವ್ವಾ!....

ಹಿರಿಯವ್ವ:—ತಾಯಿ ಕೊಡೋ ಹಾಲಿನಲ್ಲಿ ಅದು ಇರುತದೆ, ಮಗಾ!

ಸದಾಶಿವ:—....ನೀನೂ ಇಷ್ಟು ಹಾಲು ಕುಡಿ, ಅವ್ವಾ....

ಹಿರಿಯವ್ವ:—ಕುಡಿಯುತೇನೆ....ಹ್ನು! ಹಾಗೇ ಕಾಲುನೀಡಿಕೋ ಮಂಚದ ಮ್ಯಾಲೆ....ಆ್ಹSS....ಹಾಗೇSSS!....ಒರಗಿಕೋ ತೊಡೆಮ್ಯಾಲೆ..

[ಅನಂತರದ ಮೌನವನ್ನು ಕಲಕಿ ಸೈನಿಕರ ಆಲಾಪನಾಯುಕ್ತವಾದ ಹಾಡು ಮೊರೆಯುತ್ತದೆ :

**ಒಬ್ಬ (ಹೆಣ್ಣುಧ್ವನಿಯನ್ನನುಕರಿಸಿ) :**

ದಂಡಿನಾಗಿರೊ ನನ್ನ ಗಂಡು ಸರದಾರ ಬಾ
ಕಂಡಲ್ಲದೆ ನಿನ್ನ ಉಳಿಯೇನೋ ....

**ಅರ್ಧಮೇಳ (ಉತ್ತರವೆಂಬಂತೆ) :**

ಹೊಳೆಯ ದಂಡೆಯ ಚೆನ್ನಿ ನಿಲ್ಲೆ ನಾ ಬರುತೇನಿ
ಕಾಳೆಗ ಮುಗಿದ ಮರುದಿನ ....

**ಪೂರ್ಣಮೇಳ :**

ಕೆರೆಯ ಏರಿಲೆ ನಿಂತು ಸೆರಗನಾಡಿಸೋರೆ
ಬರುತೇವಿ ನಾವು ನಿಲ್ಲೀರೆ
ಬರುತೇವಿ ನಾವು ನಿಲ್ಲೀರೆ ನಾಳೆಗೆ
ದೊರೆಕೊಟ್ಟ ಸೆಲ್ಯ ಮ್ಯಾಲ್ಹೊದ್ದು....

ಹಾಡು ಕರಗಿ ಲಯವಾಗಿ ಮೌನವೇ ಅಳುತ್ತಿರುವಾಗ :]

ಸದಾಶಿವ :—(ಕ್ಷೀಣಧ್ವನಿಯಲ್ಲಿ) ಅವ್ವಾ !....ತುಂಬಾ....ಸಂಕಟ....ಕಣ್ಣು ....ಕತ್ತಲೆ ಬರುತ್ತದೆ....ನಾಳೆ....ಕಾಳೆಗ !....

ಹಿರಿಯವ್ವ :—(ಕ್ಷೀಣವಾದರೂ ಕಠಿನಛಾಯೆಯಿರುವ ಸ್ವರದಲ್ಲಿ) ಎಲ್ಲಾ ಶಿವನ ಪ್ರಸಾದ. ಮಲಗು ಶಿವಾ !....ಮಲಗು ಮಗಾ ! ನೀನು ನಾಳೆ ಕಾಳೆಗದಲ್ಲಿ ಗೆಲ್ಲುತೀಯೆ ! ಶಿವ ನಿನಗೆ ಒಳಿತುಮಾಡು ತಾನೆ !....

ಸದಾಶಿವ :—ಶಿವ ಬರುತಾನೆ !....ವೀರಭದ್ರ ಸಾಯುತಾನೆ !....ಜಯ !.... ಜಯ ! !....

[ಮತ್ತೆ ಸೈನಿಕರ ಆಲಾಪ—ಹಾಡು :

**ಮೇಳ :**

ಅಳಬ್ಯಾಡೆ ಹಡೆದವ್ವ ಅಳಬ್ಯಾಡೆ ನನ ತಂಗಿ
ಅಳಬ್ಯಾಡೆ ನನ್ನ ಮಲ್ಲೀಗೆ
ಅಳಬ್ಯಾಡೆ ನನ್ನ ಮಲ್ಲೀಗೆ ಬರುತೇನೆ
ಶಿವನಾಣೆ ನಿನ್ನ ಕೊರಳಾಣೆ....

ಹಾಡು ಹಿನ್ನೆಲೆಗೆ ಸರಿಯುತ್ತಿರಲು]

ಸದಾಶಿವ :—ಅವ್ವಾ !....

ಹಿರಿಯವ್ವ :—ಸುಖವಾಗಿ ಮಲಗಿಕೋ, ನನ್ನ ದೊರೆ! ಎಲ್ಲ ಸರಿಹೋಗುತದೆ. ಶಿವ ನಿನಗೆ ಒಳಿತು ಮಾಡುತಾನೆ.... ಇನ್ನು ನೀನು ಒಳಿತು ಕೆಡುಕು ಯೋಚಿಸೋ ಅಗತ್ಯ ಇಲ್ಲ....ಮುಂದಿನದನ್ನ ಶಿವ ನೋಡಿಕೋತಾನೆ....ಹರಸುತೇನೆ ಮಗಾ, ಎದೆತುಂಬಿ ಹರಸುತೇನೆ !....ಶಿವ ನಿನ್ನ ಕೂಡ ಇರಲಿ! ನಿನ್ನ ಕೂದಲು ಕೊಂಕದ ಹಾಗೆ ನೋಡಿಕೊಳ್ಳಲಿ!....ಮಗಾ, ಗೆಲ್ಲುತೀಯೆ ನೀನು! ನಿಜವಾಗಿ ಗೆಲ್ಲುತೀಯೆ! ನಾಡು ಹೆಮ್ಮೆಪಟ್ಟು ಹಾಡಿ ಹೊಗಳೋ ಜಯ ಪಡೆಯುತೀಯೆ!....ಕಲ್ಲುಗಳು, ಬೆಟ್ಟಗುಡ್ಡಗಳು ನಿನ್ನ ಹಾಡಿ ಹೊಗಳುತವೆ. ಮುಂದಿನ ಜನ ತಮ್ಮ ಮಕ್ಕಳಿಗೆ, ಅವರು ತಮ್ಮ ಮಕ್ಕಳಿಗೆ ನಿನ್ನ ಕಥೆ ಹೇಳುತಾ ಇರುತಾರೆ....

ಸದಾಶಿವ :—(ಮೃತಸ್ವರದಲ್ಲಿ) ಅವ್ವಾ !....ಅವ್ವಾ ! ! .... (ಮೃತನಾದ ಸೂಚನೆ)

ಹಿರಿಯವ್ವ :—(ಬಿಕ್ಕಿಬಿಕ್ಕಿ) ಶಿವಾ !.....ಶಿವಾ ! !......ಹೋಗಿಬಿಟ್ಟೆಯಾ ಶಿವಾ ?....ಅವ್ವ ನಿನಗೆ ಪ್ರಸಾದ ಅಂತ ವಿಷ ಕುಡಿಸಬೇಕಾಯಿತೆ, ಶಿವಾ ?....ಸ್ವಾಮಿ, ಹೆತ್ತ ಹೃದಯಾನ ಕಲ್ಲುಮಾಡಿಸಿದೆಯಾ, ಸ್ವಾಮಿ ?....ನಾಳೆ ಶಿವನ ಪಾದ ಸೇರುತೀಯೆ, ಮಗಾ !....ಅಲ್ಲಿ ಶಿವನ ಲೋಕದಾಗೆ....ಎಚ್ಚರ ಬಂದು ... ನನ್ನ.... ನಿನ್ನ ಅವ್ವನನ್ನ ಶಿವನ ಮುಂದೆ ದೂರಿಕೋತೀಯಾ, ಮಗಾ ?.....—ನಿಲ್ಲು. ನಾನೂ ಬರುತೇನೆ....ನಿನ್ನ ಕಳಿಸಿ ಇಲ್ಲಿ ನಾನು ಏನಾಗಿ ಬದುಕಲಿ? ....ನಾನೂ ನಿನ್ನಕೂಡ....ಶಿವನತಾವ ಬರುತೇನೆ..... — ಹ್ಞ !

ಮಗನನ್ನೆ ಕೊಂಡ ನನಗೆಲ್ಲಿ ಶಿವನ ಪಾದದ ತಾವ ಸ್ಥಳ?....—
ಅಂತೂ ಅಲ್ಲಿ ಬಾರದಿದ್ದರೂ ಇಲ್ಲಿ ಇರೋದಿಲ್ಲ, ಮಗಾ!
[ಹೆಜ್ಜೆಯ ಸದ್ದು—ಮೌನ—ಹಾಲು ಕುಡಿದ ಸದ್ದು]
ಹ್ಞ!....ಆಯಿತು!....ಇನ್ನು ನಿನ್ನ ಬದೀಲೇ ಮಲಗಿಕೋತೇನೆ, ಮಗಾ. ನೀನು ಚಿಕ್ಕವನಾದಾಗ ನಿನ್ನ ಮಲಗಿಸಿಕೊಂಡು ಮಲಗುತಾ ಇದ್ದ ಹಾಗೆ....ಹಾಗೇSSS....—ಮಗಾ, ನೀನು ಇಲ್ಲಿ ಸೋತು ಅಲ್ಲಿ ಗೆಲ್ಲುತೀಯೆ...ನಾನು ಇಲ್ಲೂ ಸೋತಿದೇನೆ, ಅಲ್ಲೂ ಸೋಲುತೇನೆ....ಶಿವನ ಇಚ್ಛೆ!....

[ಮತ್ತೆ ಹೊರಗಿನಿಂದ ಆಲಾಪನೆ—ಹಾಡು:

**ಮೇಳ:**

ಶಿವನಾಟದಾಗಿನ ಗೊಂಬೆಗಳು ನಾವವ್ವ
ಶಿವನಿಚ್ಛೆ ಬಂದು ನಾಳೆಗೆ
ಶಿವನಿಚ್ಛೆ ಬಂದು ನಾಳೆಗೆ ಬರುತೇವೆ
ಶಿವನ ಪರಸಾದ ಮುಡಕೊಂಡು....

ಹಾಡು ಮುಗಿದು ಆಲಾಪನೆ ದೂರವಾಗಿ ಮುಂದುವರಿಯುತ್ತಿರಲು, ಅದು ಹಿನ್ನೆಲೆಯಲ್ಲಿ ಕೇಳಿಸುತ್ತಿರುವಂತೆಯೇ, ಮುನ್ನೆಲೆಯ ರಂಗದಲ್ಲಿ:]

ರಂಗ:—ಒಡೇರೆ....ಹ್ಞ! ಅವ್ವಾರನ್ನ ಕಾಣದೆ ಎಷ್ಟು ದಿನಾ ಆಗಿತ್ತೋ! ....ರಾಜ್ಯಕ್ಕೆ ಅರಸು ಆದರೂ ತಾಯಿಗೆ ಮಗನೇ!....ರಾಜ್ಯ ಗೆದ್ದ ಸುಖಕ್ಕಿಂತ ಅವ್ವನ ಮಡಿಲಾಗೆ ಮಲಗೋ ಸುಖ ದೊಡ್ಡದು!....
[ಹೆಜ್ಜೆ ಕ್ಷಯಿಸುವುದು]

[ಹಿನ್ನೆಲೆಯ ದೂರದ ಆಲಾಪನೆ ಸಮೀಪವಾಗುತ್ತ ಬಂದು ಹಾಡು ಮೊದಲಾಗುತ್ತದೆ:

**ಮೇಳ**

ಶಿವನಾಟದಾಗಿನ ಗೊಂಬೆಗಳು ನಾವವ್ವ
ಶಿವನಿಚ್ಛೆ ಬಂದು ನಾಳೆಗೆ

ಶಿವನಿಚ್ಛೆ ಬಂದು ನಾಳಿಗೆ ಬರುತೇವೆ
ಶಿವನ ಪರಸಾದ ಮುಡಕೊಂಡು....

ಹಾಡು ಮುಗಿಯಲು 'ಢಣ್' ಎಂಬ ಶಬ್ದ]

ನಿವೇದಕ:—ನಾಲ್ಕುನೂರು ವರ್ಷಗಳ ಹಿಂದಿನ ಕಥೆ!....ಇಂದು ಇಕ್ಕೇರಿಯ ಗುಡಿಯೆದುರು ಬೆಳುದಿಂಗಳ ರಾತ್ರಿಯಲ್ಲಿ ಅಲ್ಲಿನ ಜನ ಅದೇ ಕಥೆಯನ್ನೆ ತಾವು ಕಂಡುದೆಂಬಷ್ಟು ಸಹಜವಾಗಿ ಹೇಳುತಿದ್ದಾರೆ. ಸುತ್ತಣ ಗುಡ್ಡಬೆಟ್ಟಗಳು ಮರಗಿಡಗಳು ಅದೇ ಕಥೆಯನ್ನು ಸಾವಿರದೊಂದನೆಯ ಬಾರಿ ಅದೇ ಬೆರಗಿನಿಂದ ಕೇಳುತ್ತಿವೆ.... ಗುಡಿಯೆದುರಿನ ಬಸವ ಎಲ್ಲವನ್ನೂ ಅರಿತವನಂತೆ ಮೌನದಿಂದ ಕಣ್ಣೀರು ಸುರಿಸುತ್ತಿದ್ದಾನೆ....ಕಥೆ ಹೇಳಿ ಮುಗಿಸಿ ಕೋಲುಹಾಕಿ ಮಂಗಳ ಹಾಡುತ್ತಿದ್ದಾರೆ....

[ಕೋಲಾಟದ ಧ್ವನಿಯನ್ನು ಕೂಡಿ ಗೀತ ಕೇಳಿಬರುತ್ತದೆ:

ಕಾಳಿಗವು ಮುಗಿಯಿತು ಕಾವಳವು ಮುಸಗಿತು
ಕತ್ತಲೆಯ ಸಾವು ತಡಕಿತು—ನರಳಾಟ
ನೆಲದ ಬಾನೆದೆಯ ಬಿರಿಸಿತು
ಎಲ್ಲಿ ಹೋದೆಯೆ ಅವ್ವ ಹಂಗಿಲ್ಲದೂರಿಗೆ
ಕಲ್ಲು ನೆತ್ತರುಕ್ಕಿ ನರಳ್ಯಾವು—ನಮ್ಮವ್ವ
ಸೊಲ್ಲಡಗಿ ಊರೇ ಕರೆದೀತು
ಬಾರವ್ವ ಬಾರೇ ಬಾ ತಾಯಿ ಹಿರಿಯವ್ವ
ಬಾರೆ ಸೀರೆಯ ಸೆರಗ ತೇಲಿಸಿ—ನಮ್ಮೂರ
ನೆಲಹೊಲ ಕುಲುಕುಲು ನಕ್ಕೀತು—ನಮ್ಮೂರ
ಸಾಲುತೇರುಗಳು ಹರಿದಾವು

ಕೊನೆಯಸಾಲು ಮೂರುಬಾರಿ ಮರುಕೊಳಿಸುವುದು. ಒಮ್ಮೆ ಒಮ್ಮೆಯೂ ಕರಗುತ್ತ ನಡೆದು ಮೂರನೆಯಬಾರಿ ಪೂರ್ಣ ಲಯವಾಗಲು]

—: ಮುಗಿಯುವುದು :—



# ಸಂಘದ ಪ್ರಕಟನೆಗಳು:

---

ಕೈಲಾಸಂದರ್ಶನ [ವಿಮರ್ಶೆ] .... ವಿವಿಧ ಲೇಖಕರು

ಅಬ್ಬ! ಏನ್ ಹೆಂಡ್ತಿ! [ಪ್ರಹಸನ] .... ಶ್ರೀ ಪರ್ವತವಾಣಿ

ಎನ್. ಜಿ. ಒ. [ನಾಟಕ] .... .... ಶ್ರೀ ವಾಸುದೇವ

ದುರ್ಗಾದಾಸ [ನಾಟಕ] .... .... ಶ್ರೀ ಪಿ. ಎಸ್. ರಾಮಪ್ಪ



## ಬರಲಿವೆ :

ರಂಗಧಾಮನ ಹಸ್ತಪುಸ್ತಕದಿಂದ

ಸಮಕಾಲೀನ ನಾಟಕದಲ್ಲಿನ ಕೆಲವು ಸಮಸ್ಯೆಗಳು

ನಾಟ್ಯಶಾಸ್ತ್ರ [ಸಂಸ್ಕೃತದಿಂದ]

ದಶರೂಪಕ ,,

ಭಾವಪ್ರಕಾಶನ ,,

ಅಭಿನಯದರ್ಪಣ ,,



## ಮಾರಾಟಕ್ಕೆ ಸಿದ್ಧವಾಗಿದೆ :

ಸೀತಾದೇವಿ [ನಾಟಕ] .... .... ದಿ। ದ. ಕೃ. ಭರದ್ವಾಜ್



## ಮಾರಾಟಗಾರರು :

ಜಲಂಧರ ಪ್ರಕಟನಾಲಯ,
ಸಾಗರ–ಶಿವಮೊಗ್ಗ.

ಶಾರದಾ ಪ್ರಕಟನಾಲಯ,
ಅರಳೇಪೇಟೆ–ಬೆಂಗಳೂರು–೨.